ಮನೋಹರ ಗ್ರಂಥ ಮಾಲೆಯ ೩೮ನೆಯ ಕುಸುಮ

# ತೆನಾಲಿ ರಾಮಕೃಷ್ಣ

(ಮೂರಂಕಿನ ಐತಿಹಾಸಿಕ ನಾಟಕ)



ಬರೆದವರು:
ಶ್ರೀ. ಸಿ. ಕೆ. ವೆಂಕಟರಾಮಯ್ಯ
ಎಂ. ಎ. ಬಿ. ಎಲ್.



ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಫೆಬ್ರುವರಿ ೧೯೪೩ ★ ಬೆಲೆ ೧ ರೂಪಾಯಿ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು:

ಶ್ರೀ. ದ. ರಾ. ಬೇಂದ್ರೆ, ಎಂ. ಎ.

ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ.

ಶ್ರೀ. ವಿ. ಕೃ. ಗೋಕಾಕ, ಬಿ. ಎ. ( ಆಕ್ಸಫರ್ಡ )

ಸಂಪಾದಕ:

ಜಿ. ಬಿ. ಜೋಶಿ





ಪ್ರಕಾಶಕರು:
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ

ಮುದ್ರಕರು:
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

# ನಮ್ಮ ಮಾತು

ಮನೋಹರ ಗ್ರಂಥಮಾಲೆಯಲ್ಲಿ ಇದುವರೆಗೆ ಪ್ರಕಟವಾದ ಗ್ರಂಥಗಳಲ್ಲಿ ಐತಿಹಾಸಿಕ ನಾಟಕಗಳೆಂದರೆ ಎರಡೇ. ಒಂದನೆಯದು ಶ್ರೀಮಾನ್ ಮುಗಳಿಯವರು ಬರೆದ 'ಸೇವಾಪ್ರದೀಪ'; ಎರಡನೆಯದು ಈಗ ಕೊಡುತ್ತಿರುವ ಶ್ರೀ. ಸಿ. ಕೆ. ವೆಂಕಟರಾಮಯ್ಯನವರ ಈ 'ತೆನಾಲಿ ರಾಮಕೃಷ್ಣ'. ಎರಡೂ ವಿಜಯನಗರಸಾಮ್ರಾಜ್ಯಕ್ಕೆ ಸಂಬಂಧಪಟ್ಟ ವಿಷಯವನ್ನೆ ನಾಟಕದ ವಸ್ತುವನ್ನಾಗಿ ಆರಿಸಿಕೊಂಡು ಬರೆದಂಥವು. ತೆನಾಲಿ ರಾಮಕೃಷ್ಣ ಇದು ಐತಿಹಾಸಿಕ ಹಿನ್ನೆಲೆಯನ್ನಿಟ್ಟುಕೊಂಡು ಬರೆದ, ವ್ಯಕ್ತಿಸ್ವಭಾವಚಿತ್ರವನ್ನು ಎತ್ತಿ ತೋರಿಸುವ ಸುಂದರ ನಾಟಕ. ಶ್ರೀ. ಸಿ. ಕೆ. ವೆಂಕಟರಾಮಯ್ಯನವರ ಪಳಗಿದ ಕೈಯು ಎಲ್ಲರನ್ನೂ ಮೆಚ್ಚಿಸುವಂತೆ ಈ ನಾಟಕವನ್ನು ಚಿತ್ರಿಸಿದೆ. ಇವರ ಈ ಮೊದಲಿನ 'ಮಂಡೋದರಿ' 'ನಚಿಕೇತ' ಮೊದಲಾದ ನಾಟಕಗಳನ್ನು ಬಾಗಿಲುಕೋಟೆಯ ವಾಸುದೇವ ವಿನೋದಿನಿ ನಾಟಕ ಸಭೆಯವರೂ, ರಾಣೆಬೆನ್ನೂರಿನ ನಾಟ್ಯಸಂಘದವರೂ ಈ ಭಾಗದಲ್ಲಿ ರಂಗಭೂಮಿಯ ಮೇಲೆ ತಂದು ಶ್ರೀಮಾನ್ ಸಿ. ಕೆ. ಯವರ ನಾಟಕಕಲೆಯ ಒಳ್ಳೆಯ ಪರಿಚಯವನ್ನು ನಮ್ಮ ಜನರಿಗೆ ಮಾಡಿಕೊಟ್ಟರು. ಅತ್ತ ಕಡೆ ಬೆಂಗಳೂರಿನ ಅಮೇಚೂರ್ ನಾಟಕ ಮಂಡಳಿಯವರೂ ಇವರ ನಾಟಕಗಳನ್ನು ಅನೇಕ ಸಲ ಅರಮನೆಯಲ್ಲಿಯೂ ಹೊರಗೆ ಥಿಯೇಟರುಗಳಲ್ಲಿಯೂ ಅಭಿನಯಿಸಿದ್ದಾರೆ. ಅವುಗಳನ್ನು ನೋಡಿದವರೂ ಆನಂದಪಟ್ಟು ಹೊಗಳಿದ್ದಾರೆ.

'....ತೆನಾಲಿ ರಾಮಕೃಷ್ಣ ಎಲ್ಲರ ಕಣ್ಣಿಗೆ ಒಬ್ಬ ವಿಕಟಕವಿ, ಪರಿಹಾಸ್ಯಗಾರ, ಕುಚೋದ್ಯಗಾರ; ಅವನ ಹೆಸರಿನಲ್ಲಿ ಹೊರಬಿರುವ ಹಲವು ಕಥೆಗಳು ತಮ್ಮ ಅಶ್ಲೀಲತೆಯಿಂದ ಅವನಿಗಾಗಲಿ ಅವನ ಪ್ರಭುವಿಗಾಗಲಿ ಗೌರವ ತರುವ ಹಾಗಿಲ್ಲ. ಶ್ರೀ. ವೆಂಕಟರಾಮಯ್ಯನವರ ರಾಮಕೃಷ್ಣ ಕುಚೋದ್ಯಗಾರನಲ್ಲ, ಸರಸ; ಅಶ್ಲೀಲಸಟುವಲ್ಲ, ವಿಕಸಿತ್ವೀವೃತಸ್ಥನಾದ ಶುದ್ಧ ಮನಸ್ಸಿನ ಸಾತ್ವಿಕ ಮೂರ್ತಿ; ವಿಕಟ ಕವಿಯಲ್ಲ, ಮಹಾಕವಿ, ಕಾವ್ಯಜೀವಿ. ಶ್ರೀ. ವೆಂಕಟರಾಮಯ್ಯನವರು ರಾಮಕೃಷ್ಣನನ್ನು ಮಹಾಕವಿಯಾಗಿ, ಸುರಸ ಸರಸಿಯಾಗಿ, ಧರ್ಮಸಚಿವನಾಗಿ, ಜ್ಞಾನಿಯಾಗಿ, ಆತ್ಮವಿರಾಗಿಯಾಗಿ ಕಂಡಿದ್ದಾರೆ. ಅವನ ಪಾತ್ರಕ್ಕೆ ಹೊಂದಿಕೊಂಡಂತೆ ಹೆಂಡತಿ ಕಮಲಾ, ಪ್ರಧಾನಿ ಅಪ್ಪಾಜಿ, ಪ್ರಭು ಕೃಷ್ಣದೇವರಾಯ, ಓಲೆಕಾರ ಚಕ್ಕಣ್ಣ, ಮೊದಲಾದವರು ತಮ್ಮ ವ್ಯಕ್ತಿತ್ವದ ಅಚ್ಚೊತ್ತಿದ್ದಾರೆ. ಕೃಷ್ಣದೇವರಾಯನ ಕಾಲದ ವಿಜಯನಗರದ ಅನೇಕ ಸುಂದರ ಚಿತ್ರಗಳು ಪ್ರಾಸಂಗಿಕವಾಗಿ ಅಲ್ಲಲ್ಲಿ ಬರುತ್ತವೆ. ಅಂದಿನ ವಿಲಾಸಜೀವನ, ಸ್ವಾಮಿಭಕ್ತಿ, ಯುದ್ಧಗಳ ಉಪಟಳ, ಆಚಾರಶೀಲತೆಗಳು ಸಂದರ್ಭೋಚಿತವಾಗಿ ಅಲ್ಲಲ್ಲಿ ಚಿತ್ರಿತವಾಗಿವೆ.

'ಮಂಡೋದರಿ' 'ನಚಿಕೇತ'ಗಳಂತಹ ಉತ್ತಮ ನಾಟಕಗಳನ್ನು ಬರೆದು ಕನ್ನಡ ನಾಡಿಗೆಲ್ಲ ಸುಪರಿಚಿತರಾದ ಶ್ರೀಮಾನ್. ಸಿ. ಕೆ. ವೆಂಕಟರಾಮಯ್ಯನವರದೊಂದು ಗ್ರಂಥವನ್ನು ನಮ್ಮ ಗ್ರಂಥಮಾಲೆಯಲ್ಲಿ ಪವಣಿಸಬೇಕೆಂದು ಬಹಳ ದಿನಗಳಿಂದಲೂ ನಮ್ಮ ಆಶೆಯಿತ್ತು. ಅದೀಗ ಸಫಲವಾಯಿತು. ಶ್ರೀಮಾನ್. ಸಿ. ಕೆ. ವೆಂಕಟರಾಮಯ್ಯನವರು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ 'ತೆನಾಲಿ ರಾಮಕೃಷ್ಣ' ಎಂಬ ಈ ನಾಟಕವನ್ನು ನಮ್ಮ ಮಾಲೆಗಾಗಿ ಬರೆದುಕೊಟ್ಟು ನಮ್ಮನ್ನೂ, ಮಾಲೆಯನ್ನೂ ಗೌರವಿಸಿದ್ದಾರೆ. ಅದಕ್ಕಾಗಿ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

ಗ್ರಂಥಮಾಲೆಯ ಇತ್ತೀಚಿನ ಎಲ್ಲ ಪುಸ್ತಕಗಳಿಗೂ ಹೊದಿಕೆ-ಚಿತ್ರವನ್ನು ಎಲ್ಲರ ಕಣ್ಣು ಇತ್ತ ಹೊರಳುವಂತೆ ಬರೆದುಕೊಟ್ಟು ಗ್ರಂಥಮಾಲೆಯ ಕೀರ್ತಿಯನ್ನೂ ಹೆಚ್ಚಿಸಿದ ಶ್ರೀಮಾನ್ ರಾಘವೇಂದ್ರರಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

**—ಸಂಪಾದಕ**

# ಮೊದಲ ಮಾತು

ತೆನಾಲಿ ರಾಮಕೃಷ್ಣನ ವಿಚಾರವಾಗಿ ಅನೇಕ ಕಥೆಗಳು ಜನಜನಿತವಾಗಿ ನಮ್ಮ ನಾಡಿನಲ್ಲಿ ಹರಡಿವೆ. ಅವುಗಳಲ್ಲಿ ಕೆಲವು ನಿಜವಾದ ಕಥೆಗಳು; ಉಳಿದುವು ಕಟ್ಟುಕಥೆಗಳೆಂಬುದರಲ್ಲಿ ಸಂದೇಹವಿಲ್ಲ. ಆ ಕಟ್ಟುಕಥೆಗಳಲ್ಲಿ ಕೆಲವಂತೂ ತೀರ ಅಸಹ್ಯಕರವಾಗಿವೆ. ತೆನಾಲಿ ರಾಮಕೃಷ್ಣನನ್ನು ವಿಕಟ ಕವಿಯೆಂದು ವರ್ಣಿಸಿ, ಜನರು ವಿಕಟವಾದ ಹಲವು ಕಥೆಗಳನ್ನೂ ಕಟ್ಟಿದ್ದಾರೆ. ಮಹಾವ್ಯಕ್ತಿಗಳಲ್ಲಾರೂ ಈ ಬಗೆಯ ಅಪಚಾರದಿಂದ ತಪ್ಪಿಸಿಕೊಂಡಿಲ್ಲ. ಪ್ರಸಿದ್ಧ ವ್ಯಕ್ತಿಗಳು ಎಲ್ಲರ ಕಣ್ಮನಗಳನ್ನೂ ಸೆಳೆಯುವುದೂ ಸಹಜ; ಪ್ರಸಿದ್ಧ ವ್ಯಕ್ತಿಗಳ ವಿಚಾರವಾಗಿ ಕೆಳ ಮಟ್ಟದ ಜನರ ಕೀಳು ಅಭಿರುಚಿಗೆ ತಕ್ಕ ಕಟ್ಟುಕಥೆಗಳು ಹುಟ್ಟಿಕೊಳ್ಳುವುದೂ ಸಹಜ; ಬೆಳೆಯ ಜೊತೆಯಲ್ಲಿ ಕಳೆಯೂ ಮೊಳೆಯುತ್ತದೆ. ಬ್ರಹ್ಮಸೂತ್ರ ಭಾಷ್ಯ ಮುಂತಾದ ಗ್ರಂಥಗಳನ್ನು ರಚಿಸಿದವರೂ ಸಾತ್ವಿಕ ಶ್ರೇಷ್ಠರೂ ಆದ ಶ್ರೀಶಂಕರಾಚಾರ್ಯರು ತಮ್ಮ ಶಿಷ್ಯರಲ್ಲಿ ಕೆಲವರಿಗೆ ಬುದ್ಧಿ ಕಲಿಸುವುದಕ್ಕಾಗಿ ಮದ್ಯಪಾನ ಮಾಡಿದರಂತೆ. ಆಚಾರ್ಯರಿಗೆ ತಾವೂ ಸಮವೆಂದು ಭಾವಿಸಿಕೊಂಡು ಗರ್ವಪಡುತ್ತಿದ್ದ ಆ ಶಿಷ್ಯರೂ ಅವರನ್ನು ಅನುಕರಣ ಮಾಡಿ ಮದ್ಯಪಾನ ಮಾಡಿದರಂತೆ; ಆ ಬಳಿಕ ಆಚಾರ್ಯರು ಕೆಂಡದಂತೆ ಕೆಂಪಗಿದ್ದ ಕಬ್ಬಿಣದ ತುಂಡನ್ನು ಕುಲಿಮೆಯಿಂದ ತೆಗೆಯಿಸಿ ತಮ್ಮ ನಾಲಗೆಯಿಂದ ನೆಕ್ಕಿ ಆ ಶಿಷ್ಯರೂ ಅದೇ ರೀತಿ ಮಾಡಬೇಕೆಂದು ಅಪ್ಪಣೆ ಮಾಡಿದರಂತೆ. ಹಾಗೆ ಮಾಡುವುದು ಶಿಷ್ಯರಿಗೆ ಸಾಧ್ಯವಿಲ್ಲದೆ ಹೋದುದನ್ನು ಕಂಡು ಆಚಾರ್ಯರು ಅವರನ್ನು ಶಪಿಸಿದರಂತೆ. ಸುಳ್ಳಿನ ಕಂತೆಗಳಾದ ಈ ಬಗೆಯ ಕಟ್ಟುಕಥೆಗಳು ಈಗಲೂ ಪ್ರಚಾರದಲ್ಲಿವೆ; ಅವುಗಳನ್ನು ನಂಬುವವರೂ ಇದ್ದಾರೆ. ತೆನಾಲಿ ರಾಮಕೃಷ್ಣನ ವಿಚಾರವಾಗಿ ಪ್ರಚಾರದಲ್ಲಿರುವ ಅನೇಕ ಕಟ್ಟುಕಥೆಗಳು ಇನ್ನೂ ಹೊಲಸಾಗಿ ನಾರುತ್ತಿವೆ.

ತೆನಾಲಿ ರಾಮಕೃಷ್ಣನ ಪ್ರತಿಭೆ ಪಾಂಡಿತ್ಯಗಳೂ, ಕವಿತಾ ಸಾಮರ್ಥ್ಯವೂ, ಹಾಸ್ಯಪ್ರವೃತ್ತಿಯೂ ಅಸಾಧಾರಣವಾಗಿದ್ದುವು. ಆತನು ಒರೆ

ದಿರುವ ' ಪಾಂಡುರಂಗಮಹಾತ್ಮ್ಯ ' ವೆಂಬ ಕಾವ್ಯವನ್ನು ಹಿಂದಿನ ತೆಲುಗು ಭಾಷೆಯ ಪಂಚಮಹಾಕಾವ್ಯಗಳಲ್ಲೊಂದೆಂಬುದಾಗಿ ಆಂಧ್ರರು ಭಾವಿಸಿದ್ದಾರೆ. ನಾನು ಆ ಗ್ರಂಥವನ್ನು ಓದಿದಾಗ ಅದರ ಹಲವು ಭಾಗಗಳ ಕಾವ್ಯಸಂಪತ್ತನ್ನೂ ಬಂಧುರ ಶೈಲಿಯನ್ನೂ ಕಂಡು ನನಗೆ ಬಹಳ ಹರ್ಷವುಂಟಾಯಿತು. ಆತನ ವಿಚಾರವಾಗಿ ಅಸಂಭವವಾದ ಮತ್ತು ಅಸಹ್ಯಕರವಾದ ಅನೇಕ ಕಟ್ಟುಕಥೆಗಳು ಹುಟ್ಟಿ, ಆತನ ವಿಷಯದಲ್ಲಿ ಎಷ್ಟು ಮಟ್ಟಿನ ಅಪಚಾರ ನಡೆದಿದೆಯೆಂದು ವಿಷಾದವೂ ಆಯಿತು. ತೆನಾಲಿ ರಾಮಕೃಷ್ಣನೇನೂ ಸಾಮಾನ್ಯನಲ್ಲ. ದೊಡ್ಡ ಕವಿಯಾಗಿದ್ದುದರ ಜೊತೆಗೆ, ವಿಜಯನಗರದ ಶ್ರೇಷ್ಠ ಸಮ್ರಾಟನಾಗಿದ್ದ ಶ್ರೀ ಕೃಷ್ಣದೇವರಾಯನ ಕೃಪೆಗೂ ಪಾತ್ರನಾಗಿದ್ದವನು. ಆದಕಾರಣ, ತೆನಾಲಿ ರಾಮಕೃಷ್ಣನನ್ನು ಮುಖ್ಯಪಾತ್ರವಾಗಿಟ್ಟುಕೊಂಡು ನಾಟಕವನ್ನು ಬರೆಯಬೇಕೆಂಬ ಅಭಿಲಾಷೆಯುಂಟಾಯಿತು.

ವಿಜಯನಗರದ ಸಾಮ್ರಾಜ್ಯದ ವಿಷಯವಾಗಿ ಇಂಗ್ಲಿಷ್ ಭಾಷೆಯಲ್ಲಿರುವ ಗ್ರಂಥಗಳನ್ನೂ, ಅನೇಕ ತೆಲುಗು ಗ್ರಂಥಗಳನ್ನೂ ವ್ಯಾಸಂಗ ಮಾಡಿ ಕಥಾವಸ್ತುವನ್ನೊದಗಿಸಿಕೊಂಡುದುದಲ್ಲದೆ ಆಗಿನ ಕಾಲಕ್ಕೆ ಅಸಹಜವೆನಿಸದಿರುವ ಅನೇಕ ನೂತನ ಸನ್ನಿವೇಶಗಳನ್ನೂ ಕಲ್ಪಿಸಿಕೊಂಡು ಈ ನಾಟಕವನ್ನು ರಚಿಸಿದ್ದೇನೆ. ಕನ್ನಡಿಗರ ಹೆಮ್ಮೆಯಾದ ವಿಜಯನಗರ ಸಾಮ್ರಾಜ್ಯದ ಹಿರಿಮೆಯನ್ನೂ ಸೊಬಗನ್ನೂ ಚಿತ್ರಿಸಲು ಪ್ರಯತ್ನಿಸಿದ್ದೇನೆ. ಈ ನಾಟಕದಲ್ಲಿ ತೆನಾಲಿ ರಾಮಕೃಷ್ಣನನ್ನು ವಿಕಟಕವಿಯಾಗಿ ಚಿತ್ರಿಸಿಲ್ಲ. ಈ ನಾಟಕದ ರಾಮಕೃಷ್ಣನು ಮಹಾಕವಿ; ಆದಿಶಕ್ತಿಯಾದ ಮಹಾಕಾಳಿಗೆ ಆತ್ಮಾರ್ಪಣ ಮಾಡಿರುವ ಭಕ್ತಶ್ರೇಷ್ಠ; ಸುಸಂಸ್ಕೃತನಾದ ಸಾತ್ವಿಕ; ರಸಿಕ ಶೇಖರನಾದ ಹಾಸ್ಯಗಾರ; ಕಾಮಿನೀ ಕಾಂಚನಗಳ ಬಲೆಗೆ ಬೀಳದಿರುವ ಸದ್ಗೃಹಸ್ಥ; ನಿರಹಂಕಾರಿಯಾದ ಪರೋಪಕಾರಿ; ದೇಶಭಕ್ತನಾದ ಧರ್ಮಸಚಿವ. ಜಕ್ಕಣ, ಇಮ್ಮಡಿ ಭೈರರಸ, ತಿರುಮಲದೇವಿ, ಚಿನ್ನಾದೇವಿ, ಅಪ್ಪಾಜಿ, ಕೃಷ್ಣದೇವರಾಯ ಮುಂತಾದ ಐತಿಹಾಸಿಕ ವ್ಯಕ್ತಿಗಳನ್ನೂ ಇತರ ಕೆಲವು ಕಲ್ಪಿತ ಪಾತ್ರಗಳನ್ನೂ ಯಥಾಯೋಗ್ಯವಾದ ರೀತಿಗಳಲ್ಲಿ ಚಿತ್ರಿಸಿದ್ದೇನೆ. ಪಾತ್ರರಚನೆಯಲ್ಲಿಯೂ ವಸ್ತುರಚನೆಯಲ್ಲಿಯೂ ನಾನು ಸ್ವಲ್ಪ ಮಟ್ಟಿನ ಸ್ವಾತಂತ್ರ್ಯವನ್ನು ವಹಿಸಿದ್ದೇನೆ. ಐತಿಹಾಸಿಕ ನಾಟಕವನ್ನು ಬರೆಯುವಾಗ್ಗೆ ಅದು

ಅನಿವಾರ್ಯವೆಂಬುದು ಗೊತ್ತೇ ಇದೆ. ಇತಿಹಾಸದ ದೃಷ್ಟಿಯಿಂದ ನೋಡಿ
ದರೆ ಕೇವಲ ಧೂರ್ತರೇ ಆದ ಬ್ರೂಟಸ್ ಮತ್ತು ಕ್ಯಾಸಿಯಸ್ ಎಂಬಿಬ್ಬರೂ
ಷೇಕ್ಸ್ಪಿಯರ್ ಮಹಾಕವಿಯ ಜ್ಯೂಲಿಯಸ್ ಸೀಜರ್ ನಾಟಕದಲ್ಲಿ ದೇಶ
ವತ್ಸಲರಾದ ಮಹಾವ್ಯಕ್ತಿಗಳಾಗಿ ಪರಿಣಾಮಹೊಂದಿದ್ದಾರೆ. ವಿಷಯ
ಲಂಪಟನೂ ಕಪಟಿಯೂ ಆದ ಮಹಾಭಾರತದ ದುಷ್ಯಂತನು ಕಾಳಿದಾಸ
ಮಹಾಕವಿಯ ಅಭಿಜ್ಞಾನ ಶಾಕುಂತಲ ನಾಟಕದಲ್ಲಿ ರಾಜರ್ಷಿಯಾಗಿ ರಂಜಿ
ಸುತ್ತಿದ್ದಾನೆ. ಅತಿ ಕ್ರೂರಿಯಾದ ಪ್ರಚಂಡ ಪ್ರದ್ಯೋತನು ಭಾಸಮಹಾ
ಕವಿಯ ಕಲಾಕೌಶಲ್ಯದಿಂದ ಸೌಜನ್ಯದ ನೆಲೆಯಾದ ಸದ್ಗೃಹಸ್ಥನಾಗಿ
ಶೋಭಿಸುತ್ತಿದ್ದಾನೆ. ಭಾಸ ಮಹಾಕವಿ ರಚಿತವಾದ ಪಂಚರಾತ್ರ ರೂಪಕ
ದಲ್ಲಿ, ಮಹಾಭಾರತದ ಉದ್ಧತ ದುರ್ಯೋಧನನು ಧರ್ಮವೀರ ದುರ್ಯೋ
ಧನನಾಗಿ ಮೆರೆಯುತ್ತಿದ್ದಾನೆ. ಆ ಮಹಾಕವಿಗಳ ಮೇಲ್ಪಂಕ್ತಿಯನ್ನೇ
ಭಕ್ತಿ ಗೌರವಗಳಿಂದ ಅನುಸರಿಸುವುದು ಅವಶ್ಯ ಕರ್ತವ್ಯವೆಂದು ನಾನು
ಭಾವಿಸಿದ್ದೇನೆ. ಈ ನಾಟಕದ ಕಾಲಕ್ಕೆ ಸಂಬಂಧಪಟ್ಟ ವಾತಾವರಣದ
ಹಿನ್ನೆಲೆಯನ್ನು ಕಲ್ಪಿಸುವ ಉದ್ದೇಶದಿಂದ ಕೆಲವು ತೆಲುಗು ಪದ್ಯಗಳನ್ನೂ
ಕೆಲವು ಸಂಸ್ಕೃತ ಶ್ಲೋಕಗಳನ್ನೂ ಸೇರಿಸಿದ್ದೇನೆ. ಇಂಗ್ಲೀಷ್ ಭಾಷೆಯಲ್ಲಿ
ಅಭಿಮಾನಿಯಾಗಿದ್ದ ಷೇಕ್ಸಪಿಯರ್ ಮಹಾಕವಿಯಿಂದ ರಚಿತವಾದ
ಒಂದು ಐತಿಹಾಸಿಕ ನಾಟಕದಲ್ಲಿ ಫ್ರೆಂಚ್ ಭಾಷೆಯ ಅನೇಕ ವಾಕ್ಯಗಳಿವೆ.
ಈಚೆಗೆ ಕನ್ನಡ ಭಾಷೆಯಲ್ಲಿ ರಚಿತವಾಗಿರುವ ಅನೇಕ ಸಾಮಾಜಿಕ ನಾಟಕ
ಗಳಲ್ಲಿ ಇಂಗ್ಲಿಷ್ ಭಾಷೆಯ ಪದಗಳ ಸುರಿಮಳೆಯುಂಟು. 'ನಮ್ಮ ಸಮಾಜ'
ಎಂಬ ಹೆಸರನ್ನಿಟ್ಟು ಬರೆದಿರುವ ಸಾಮಾಜಿಕ ನಾಟಕದಲ್ಲಿ ನಾನೂ ಇಂಗ್ಲಿಷ್
ಭಾಷೆಯ ಅನೇಕ ಪದಗಳನ್ನು ಪಯೋಗಿಸಿದ್ದೇನೆ. ಸಂಸ್ಕೃತವೂ ತೆಲುಗೂ
ಕನ್ನಡಿಗರಿಗೆ ಇಂಗ್ಲಿಷ್ ಭಾಷೆಗಿಂತ ದೂರವಾದವುಗಳೇನೂ ಅಲ್ಲ. ಅದೂ
ಹಾಗಿರಲಿ. ಅನೇಕ ಶತಮಾನಗಳ ಹಿಂದಿನವನಾದ ಶ್ರೀನಾಥನೆಂಬ ತೆಲುಗು
ಕವಿ 'ತಲ್ಲೀ ಕನ್ನಡ ರಾಜ್ಯಲಕ್ಷ್ಮಿ ! ದಯೆಲೇದಾ ' ಎಂದು ಪ್ರಶಂಸೆ ಮಾಡಿ
ರುವ ಮಾತುಗಳು ಕಿವಿಗೆ ಅಮೃತದಂತಿವೆ. ಕನ್ನಡ ಭಾಷೆಯಲ್ಲಿ ಆತನಿಗೆ
ಬಹಳ ಪ್ರೀತಿ ಇದ್ದಿತೆಂಬುದಕ್ಕೂ ಒಂದೆರಡು ನಿದರ್ಶನಗಳಿವೆ. ಅನೇಕ ಶತ
ಮಾನಗಳ ಹಿಂದಿನವನಾದ ಆತನೇ ಅಷ್ಟು ಹೆಚ್ಚಿನ ಔದಾರ್ಯವನ್ನು

ತೋರಿಸಿದ್ದಾನೆ. ಶ್ರೀಕೃಷ್ಣದೇವರಾಯನಂತೂ, ತಾನು ಆಂಧ್ರನಾಗಿದ್ದೂ ವಿಜಯನಗರಕ್ಕೆ ಕನ್ನಡ ರಾಜ್ಯವೆಂಬ ಹೆಸರನ್ನೇ ಉಳಿಸಿಟ್ಟು, ಕನ್ನಡ ರಾಜ್ಯ ರಮಾರಮಣನೆಂಬ ಬಿರುದನ್ನು ಪಡೆದು, ಔದಾರ್ಯವನ್ನು ಮೆರೆದಿದ್ದಾನೆ. ತೆಲುಗು ಭಾಷೆಯಲ್ಲಿ ನಾವು ಆದರ ತೋರಬೇಕಾದುದು ಆ ಔದಾರ್ಯಕ್ಕೆ ಸಲ್ಲಬೇಕಾದ ಕಾಣಿಕೆ.

ಬೆಂಗಳೂರು ನಗರದಲ್ಲಿರುವ ನಾಟ್ಯವಿಲಾಸಿಗಳಾದ ಅಮೆಚೂರ್ ನಾಟಕ ಮಂಡಲಿಯವರು ನನ್ನಲ್ಲಿ ಆದರ ತೋರಿ, ಈ ನಾಟಕವನ್ನು ಬಹು ಚೆನ್ನಾಗಿ ಅನೇಕ ಸಾರಿ ಪ್ರದರ್ಶಿಸಿ ಪ್ರೇಕ್ಷಕರನ್ನು ಸಂತೋಷಪಡಿಸಿದ್ದಾರೆ. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರವರು ೧೯೩೩ನೆಯ ಇಸವಿಯಲ್ಲಿ ಈ ನಾಟಕವನ್ನು ಅರಮನೆಯಲ್ಲಿ ಆಡಿಸಿ, ತಮ್ಮ ಮೆಚ್ಚಿಕೆಯ ಮಾತುಗಳನ್ನು ನನ್ನೊಡನೆ ಅಪ್ಪಣೆ ಕೊಡಿಸಿ ಕೃಪೆ ಮಾಡಿದರು. ಈಗ ಮೈಸೂರು ಸಂಸ್ಥಾನದ ದಿವಾನ್‌ರಾಗಿರುವ ಪ್ರಧಾನ ಶಿರೋಮಣಿ ಶ್ರೀಮಾನ್ ಎನ್. ಮಾಧವರಾವ್, ಬಿ. ಎಲ್. ಸಿ. ಐ. ಇ; ಅವರು ತಮ್ಮ ಅಧ್ಯಕ್ಷತೆಯಲ್ಲಿ ಈಚೆಗೆ ಈ ನಾಟಕ ಪ್ರದರ್ಶನ ನಡೆದಾಗ್ಗೆ ಅಪ್ಪಣೆ ಕೊಡಿಸಿದ ಭಾಷಣದಲ್ಲಿ ನಾಟಕದ ವಿಚಾರವಾಗಿಯೂ ನಟರ ವಿಚಾರವಾಗಿಯೂ ತಮ್ಮ ಮೆಚ್ಚಿಕೆಯನ್ನು ಸೂಚಿಸಿ ದಯೆತೋರಿದರು; 'ಕನ್ನಡನುಡಿ', 'ತಾಯಿನಾಡು,', 'ವಿಶ್ವಕರ್ಣಾಟಕ' ಮುಂತಾದ ಪತ್ರಿಕೆಗಳವರೂ, ಇತರ ಅನೇಕ ಮಂದಿ ವಿದ್ವಾಂಸರೂ, ಹಿರಿಯರೂ, ಮಿತ್ರರೂ ಈ ನಾಟಕವನ್ನು ಪ್ರಶಂಸಿಸಿ ಉಪಕರಿಸಿದರು; ಅನೇಕ ನಾಟ್ಯ ವಿಲಾಸಿ ಸಂಘಗಳು ಈ ನಾಟಕವನ್ನು ಅಭಿನಯಿಸಿದುವು. ಈ ಉಪಕಾರಗಳಿಗಾಗಿ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು. ಮನೋಹರ ಗ್ರಂಥಮಾಲೆಯ ಸಂಪಾದಕರಾದ ಶ್ರೀಮಾನ್ ಜಿ. ಬಿ. ಜೋಶಿಯವರು ನನ್ನಲ್ಲಿ ಪ್ರೇಮಾದರಗಳನ್ನು ತೋರಿಸಿ ತಮ್ಮ ಗ್ರಂಥಮಾಲೆಯಲ್ಲಿ ಈ ನಾಟಕವನ್ನು ಪ್ರಕಟಿಸಿ ಉಪಕಾರ ಮಾಡಿದ್ದಾರೆ. ಅವರಿಗೂ ಸಹ, ನಾನು ವಿಶೇಷ ಸಂತೋಷದಿಂದ ನನ್ನ ಕೃತಜ್ಞತೆಯನ್ನು ಸೂಚಿಸುತ್ತೇನೆ.

ಬೆಂಗಳೂರು
೫-೧-೧೯೪೩

**ಸಿ. ಕೆ. ವೆಂಕಟರಾಮಯ್ಯ**

# ತೆನಾಲಿ ರಾಮಕೃಷ್ಣ

## ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೧ | ೨೪ | ಪೊಂಸ್ತ್ವಂ | ಪುಂಸ್ತ್ವಂ |
| ೧೨ | ೭ | ಹೆಳಿದ್ದಂತೆ | ಹೇಳಿದ್ದಂತೆ |
| ೧೪ | ೧೮ | ಮೊಸಳಿ | ಮೊಸಳೆ |
| ೧೫ | ೫ | ಭೀತಿಯಲ್ಲಿ | ಭೀತಿಯಿದ್ದಲ್ಲಿ |
| ೧೬ | ೨೬ | ನಿಮ್ಮ | ತಮ್ಮ |
| ೨೩ | ೪ | ಕಳೇಬರ | ಕಲೇವರ |
| ೨೩ | ೫ | ಕೇಳಿ | ಕೇಲಿ |
| ೨೩ | ೯ | ಹರಿವ್ | ಹರಿಂ |
| ೨೪ | ೧೦ | ಕಾಮತಿ | ಕಾಮುಪಿ |
| ೨೪ | ೧೧ | ಪರಾಮನಾ | ಪರಾಮನು |

ಮುಂದಿನ ಕುಸುಮ

# ಬೆಟ್ಟದ ಜೀವ

ಸಾಹಸಿ ಜೀವಗಳೆರಡರ
ಜೀವನವನ್ನು ಚಿತ್ರಿಸುವ
ರಮ್ಯ ಕಾದಂಬರಿ



ಬರೆದವರು:

ಶಿವರಾಮ ಕಾರಂತ

ವರುಷದಲ್ಲಿ
ಸುಮಾರು ೧೫೦ ಪುಟಗಳುಳ್ಳ
೬ ಸರಸ ಗ್ರಂಥಗಳು



ವಾರ್ಷಿಕ ಚಂದಾ:
೩ ರೂ. ೮ ಆ. ಮಾತ್ರ
(ಅಂ. ವೆ. ಸೇರಿ)



ಇದೀಗ ಪ್ರಕಟವಾಗಿದೆ!

# ಆಶುನಾಟಕಗಳು

ಇದು ಮನೋಹರ ಗ್ರಂಥಮಾಲೆಯ ಸಾಹಿತ್ಯೋತ್ಸವದ ಸಮಯಕ್ಕೆ ಏರ್ಪಡಿಸಿದ ಆಶುನಾಟಕಗಳ ಸ್ಪರ್ಧೆಯಲ್ಲಿ ಭಾಗವಹಿಸಿದ ಮೂವರು ನಾಟ್ಯಸಂಘದವರ ಏಕಾಂಕ ನಾಟಕಗಳ ಸಂಗ್ರಹ. ಬೆಲೆ: ೦-೧೦-೦

ನಮ್ಮ ಚಂದಾದಾರರಿಗೆ ೩/೪ ಬೆಲೆಗೆ ಕೊಡುತ್ತೇವೆ. ಪಡೆಯಲಿಚ್ಛೆಯುಳ್ಳವರು ೦-೭-೬ + ಅಂಚೆ ವೆಚ್ಚ ೦-೧-೩ ಹೀಗೆ ಒಟ್ಟು ೦-೮-೯ ಸ್ಟ್ಯಾಂಪು ಕಳಿಸಿಕೊಡಬೇಕು.
ಈ ಸವಲತ್ತಿನ ಅವಧಿ ಮೂರು ತಿಂಗಳಗಳ ವರೆಗೆ ಮಾತ್ರ ಇದೆ. ಬೇಗನೆ ತರಿಸಿಕೊಳ್ಳಿರಿ!

# ಮೊದಲನೆಯ ಅಂಕ



## ದೃಶ್ಯ ೧

[ ವಿಜಯನಗರಕ್ಕೆ ಸಮೀಪವಾಗಿರುವ ಕಾಡಿನ ಮಧ್ಯದಲ್ಲೊಂದು ಕಾಳಿಕಾ ದೇವಾಲಯದ ಒಳಭಾಗ. ಗರ್ಭಗುಡಿಯಲ್ಲಿ ವಸ್ತ್ರಾಭರಣಭೂಷಿತವಾಗಿ ಪುಷ್ಪಾಲಂಕೃತ ವಾದ ಕಾಳೀ ವಿಗ್ರಹವು ವಿರಾಜಿಸುತ್ತಿರುವುದು. ತೂಗು-ಸೊಡರುಗಳಲ್ಲಿ ನಂದಾದೀಪವು ಉರಿಯುತ್ತಿರುವುದು. ದೇವಿಯ ವಿಗ್ರಹದ ಎಡಬಲಗಳಲ್ಲಿ ಎರಡು ದೊಡ್ಡ ದೀಪಸ್ತಂಭ ಗಳೂ ಪೂಜಾಸಾಮಗ್ರಿ ಮುಂತಾದವುಗಳೂ ಇರುವುವು. ರಾತ್ರಿಯ ಪೂಜೆಯು ಮುಗಿದು ಮಹಾಮಂಗಳಾರತಿಯಾಗುತ್ತಿರುವಲ್ಲಿ ತೆರೆಯು ಮೇಲಕ್ಕೇಳುವುದು. ಅರ್ಚಕನೂ ತೆನಾಲಿ ರಾಮಲಿಂಗನೆಂಬವನೂ* ಇಬ್ಬರೇ ಇರುವರು. ]

**ರಾಮಲಿಂಗ:**– (ತೆರೆಯು ಮೇಲಕ್ಕೇಳುವಲ್ಲಿ ಕೈಮುಗಿದುಕೊಂಡು)

**ಓಂಕಾರ ಪಂಜರ ಶುಕೀ**
**ಮುಪನಿಷದುದ್ಯಾನ ಕೇಳಿಕಲಕಂಠೀಮ್ ।**
**ಆಗಮ ವಿಪಿನ ಮಯೂರೀ**
**ಮಾರ್ಯಾಮಂತರ್ವಿಭಾವಯೇ ಗೌರೀಮ್ ।**
**ಶ್ಯಾಮತನು ಸೌಕುಮಾರ್ಯಾಂ**
**ಸೌಂದರ್ಯಾನಂದ ಸಂಪದುನ್ಮೇಷಾಮ್ ।**
**ತರುಣಿಮಕರುಣಾ ಪೂರಾಂ**
**ಮದಜಲ ಕಲ್ಲೋಲ ಲೋಚನಾಮ್ ವಂದೇ ॥**

**ಅರ್ಚಕ:**—(ಮಂಗಳಾರತಿಯನ್ನು ತಂದು ಹಿಡಿದು, ಅರೆವಾಸಿ ಹೊರಗಿನ ಪ್ರಪಂಚ ವನ್ನೇ ಮರೆತಂತೆ ತೋರುತ್ತ ಆನಂದಪರವಶನಾಗಿರುವ ರಾಮಲಿಂಗನನ್ನು ಕುರಿತು) ಸ್ವಾಮಿ ! ಸ್ವಾಮಿ ! ರಾಮಲಿಂಗಯ್ಯನವರೇ ! ಮಂಗಳಾರತಿ ತಂದಿದ್ದೇನೆ. ಮಂಗಳಾರತಿ ! ಮಂಗಳಾರತಿ !

---

* ತೆನಾಲಿ ರಾಮಕೃಷ್ಣನ ಮೊದಲಿನ ಹೆಸರ ತೆನಾಲಿ ರಾಮಲಿಂಗಯ್ಯನೆಂದು.

**ರಾಮಲಿಂಗ:**—(ನಿದ್ರೆಯಿಂದ ಎಚ್ಚತ್ತವನಂತೆ) ಮಂಗಳಾರತಿಯೆ! ಆಗಲಿ ಸ್ವಾಮಿ. (ಸ್ವೀಕರಿಸುವನು.)

ಅರ್ಚಕ:—ಇದೇನು? ಹೀಗೆ ಮೈಮರೆತಿದ್ದಿರಿ? (ಹಲಗಾರತಿಯನ್ನು ದೇವಿಯ ವಿಗ್ರಹದ ಎದುರಿಗಿರುವ ತಟ್ಟೆಯಲ್ಲಿಟ್ಟು, ರಾಮಲಿಂಗನಿಗೆ ತೀರ್ಥಪ್ರಸಾದಗಳನ್ನು ಕೊಟ್ಟು, ಆಬಳಿಕ ಹೊರಡಲು ಸಿದ್ಧನಾಗಿ) ಇಷ್ಟು ಕತ್ತಲಾಗುವ ವರೆಗೆ ನಾನೆಂದೂ ಇರಲಿಲ್ಲ. ನೀವು ಮಧ್ಯಾಹ್ನ ಬಂದದ್ದರಿಂದ ನಾನು ಇಲ್ಲಿದ್ದೆ. ನಡೆಯಿರಿ ಇನ್ನು ಹೊರಡೋಣ. ನಮ್ಮ ಮನೆ ವಿಜಯನಗರದ ಹೊರಚಿಕ್ಕಿನಲ್ಲಿ, ಇಲ್ಲಿಗೆ ಎರಡು ಹರದಾರಿ. ಬೇಗ ಬೇಗ ಹೊರಟುಹೋಗೋಣ. ಆರ ಮನೆಗೂ ಮಹಾಪ್ರಧಾನರು ಅಪ್ಪಾಜಿಯವರಿಗೂ ಪ್ರಸಾದ ತಲುಪಿಸ ಬೇಕು.

ರಾಮಲಿಂಗ:—ನೀವು ಹೊರಡಿ. ನಾನೆಲ್ಲಿಗೂ ಬರುವಹಾಗಿಲ್ಲ. ಈ ದಿನ ಇಲ್ಲಿಯೇ ಇರಬೇಕೆಂದು ಸಂಕಲ್ಪ ಮಾಡಿದ್ದೇನೆ.

ಅರ್ಚಕ:—(ಆಶ್ಚರ್ಯದಿಂದ) ಏನೆಂದಿರಿ? ಬದುಕಿರಬೇಕೆಂಬ ಆಸೆ ಇಲ್ಲ ವೇನು ನಿಮಗೆ? ಅಥವಾ ಇಲ್ಲಿಯ ವಿಚಾರ ತಿಳಿದಿಲ್ಲವೊ? ನೀವು ಈ ಸುತ್ತಿನವರಲ್ಲವೊ?

ರಾಮ:—ಏನು, ಇಲ್ಲಿಯ ವಿಚಾರ? ನಾನು ತೆನಾಲಿಯುವನು. ಆದರೂ ಹಿಂದೆ ಕವಿತ್ವದ ಸಂಭಾವನೆಯ ಹುಚ್ಚು ಹಿಡಿದಿದ್ದಾಗ ವಿಜಯನಗರಕ್ಕೆ ಬಂದಿದ್ದೆ. ಆಗ ಪ್ರಭುದರ್ಶನವಾಗಲಿಲ್ಲ. ಹೊರಟುಹೋದೆ.

ಅರ್ಚಕ:—ಇಲ್ಲಿಯ ಕಾಳಿ ಉಗ್ರಕಾಳಿ. ವಿದ್ಯಾರಣ್ಯರು ಈ ತಾಯಿಗೆ ಪೂಜೆಮಾಡಿದ್ದರಂತೆ. ರಾತ್ರಿಯ ವೇಳೆ ಸಂಚಾರ ಹೊರಡುವುದುಂಟಂತೆ. ಇಲ್ಲಿಯ ಬಾಗಿಲಿಗೆ ಬೀಗವೇ ಹಾಕುವುದಿಲ್ಲ. ಒಂದು ಸಲ, ಒಡವೆ ಕದಿಯಲು ಬಂದಿದ್ದ ಒಬ್ಬ ಕಳ್ಳ, ಒಂದು ರಾತ್ರಿ ದೇವಸ್ಥಾನಕ್ಕೆ ಬಂದು ಬೆಳಗಾಗುವ ವೇಳೆಗೆ ರಕ್ತ ಕಾರಿಕೊಂಡು ಸತ್ತ. ನಾನು ಒಂದು ಸಂಪ್ರೋಕ್ಷಣೆ ಮಾಡಿಸಿದೆ. ಇಂತಹ ಐತಿಹ್ಯ ಇನ್ನೂ ಅನೇಕವಿವೆ. ಕತ್ತಲಾದ ಮೇಲೆ ಕಾಡಿನ ಮಧ್ಯದ ಈ ದೇವಾಲಯಕ್ಕೆ ಯಾರೂ ಬರುವುದಿಲ್ಲ. ಸಂಚಾರ ಹೊರಡುವ ದೇವೀ ಮುರೀತಾಳೇಂತ ಭಯ.

**ರಾಮ:**—ನೀವು ಎಂದೂ ಇಲ್ಲಿದ್ದು ಅದನ್ನೆಲ್ಲ ಪರೀಕ್ಷೆ ಮಾಡಿಲ್ಲವೆ?

**ಅರ್ಚಕ:**—ನಾನೇ? ನಾನೇ? ನನ್ನ ಸಾಯಿ ಅಂತೀರೇನು ಹಾಗಾದರೆ? ಹೋಗೋಣ ಬನ್ನಿ. ಈ ದಿನ ನಮ್ಮ ಮನೆಯಲ್ಲಿರುವಿರಂತೆ.

**ರಾಮು:**—ನಿಮ್ಮ ಕಥೆ ಚೆನ್ನಾಗಿದೆ. ಸಂತೋಷ. ಸಂತೋಷ.

**ಅರ್ಚಕ:**—ಈಗ ಸರಿಹೋಯಿತು! ನಾನು ಕಂಡದ್ದು ಕಂಡಹಾಗೆ ಹೇಳಿದರೆ ಕಥೆಯಂತೆ ಕಥೆ! ಹೋಗಲಿ. ಬದುಕಿ ಬಾಳುವ ವಯಸ್ಸು, ಸುಮ್ಮನೆ ಬನ್ನಿ.

**ರಾಮು:**—ತುಂಗಭದ್ರೆಗೆ ಬಿದ್ದು ಸಾಯಬೇಕೆಂದು ಬಂದೆ. ನಿಮ್ಮನ್ನು ಕಂಡೆ. ತಟ್ಟೆಬಟ್ಟೆ ತೊಳೆಯಲು ನಿಮಗೆ ಸಹಾಯಮಾಡಿದೆ. ಪೂಜೆಯು ಮುಗಿಯಿತು. ಇನ್ನು ನಿಮ್ಮ ದಾರಿ ನಿಮಗೆ. ನನ್ನ ದಾರಿ ನನಗೆ.

**ಅರ್ಚಕ:**—ಸಾಯಬೇಕೂ ಅಂತ ಇಲ್ಲಿಗೇಕೆ ಬಂದಿರಿ? ನಿಮ್ಮ ಊರಾದ ತೆನಾಲಿಯಲ್ಲಿ ಹೊಳೆ, ಕೆರೆ, ಭಾವಿ, ಕೊಳ, ಒಂದೂ ಇರಲಿಲ್ಲವೇನು? ಸಾಯೋಕೆ ತುಂಗಭದ್ರೆಯ ವರೆಗೆ— ಅದೂ ವಿಜಯನಗರದ ವರೆಗೆ—ಬರ ಬೇಕಾಯಿತೆ?

**ರಾಮು:**—ನೀವೆಂದೂ ಸಾಯುವ ಪ್ರಯತ್ನ ಮಾಡಿಲ್ಲ. ಸಾಯುವುದು ಸುಲಭವಲ್ಲ. ಸಾವು ಬಯಸುವವರಿಗೆ ಬುದ್ಧಿಯು ಸ್ವಾಧೀನವಿರುವುದಿಲ್ಲ.

**ಅರ್ಚಕ:**—ಸ್ವಾಮಿ! ಮಂಗಳಾರತಿ ಕೊಟ್ಟಾಗಲೇ ನೋಡಿದೆ. ನಿಮಗೆ ಬುದ್ಧಿ ಸ್ವಾಧೀನವಿಲ್ಲ. ಹುಚ್ಚರಂತಾಡುತ್ತಿದ್ದೀರಿ. ಸುಮ್ಮನೆ ನಮ್ಮ ಮನೆಗೆ ಬನ್ನಿ. ನಿಮಗೆ ಹುಚ್ಚು ಹಿಡಿದಿದೆ. ಅದಕ್ಕೇ ಇಲ್ಲಿರಬೇಕೆನ್ನುತ್ತೀರಿ.

**ರಾಮು:**—ಸಾವು ಬಯಸುವವರು ನಿಮ್ಮ ಭಾಗಕ್ಕೆ ಹುಚ್ಚರು. ಬದುಕು ಬಯಸುವವರು ನನ್ನ ಭಾಗಕ್ಕೆ ಹುಚ್ಚರು. ಅಲ್ಲ ಸ್ವಾಮಿ! 'ಇಲ್ಲಿದ್ದರೆ ಕಾಳಿಕಾದೇವಿ ಮುರಿದುಬಿಡುತ್ತಾಳೆ ಎಂದಿರಿ. ಇದು ಪವಿತ್ರ ವಿಗ್ರಹ. ವಿದ್ಯಾರಣ್ಯರು ಪೂಜೆಮಾಡಿದ್ದರು ಎಂದಿರಿ. ಈಗ ಹೀಗೆ ಹೇಳು ತ್ತೀರಿ. ನಾನೇ ಸಾಯುವುದಕ್ಕಿಂತ ಅವಳೇ ಕೊಲ್ಲಲಿ. ನೀವು ಹೊರಡಿ.. ಬೇಡ ಬೇಡ. ಇಲ್ಲೇ ಇರಿ. ಇಬ್ಬರೂ ಇದ್ದು ಪರೀಕ್ಷೆ ಮಾಡೋಣ.

**ಅರ್ಚಕ:**—(ಬೆಚ್ಚಿ) ನಮ್ಮಪ್ಪಾ! ನನಗೆ ಅಂಥಾ ಘೋರ ಪರೀಕ್ಷೆ ಖಂಡಿತವಾಗಿಯೂ ಬೇಡ: ನಿಮ್ಮ ಮೂರ್ಖತನವೇ ನಿಮ್ಮನ್ನು ಕೊಲ್ಲುತ್ತೆ. ಇಲ್ಲಿ ನಡೆದ ಸಂಗತಿಗಳನ್ನೆಲ್ಲಾ ಮಹಾಪ್ರಧಾನಿಗಳಿಗೂ ಅರಿಕೆಮಾಡಿಬಿಡು

ತ್ತೇನೆ. ಇನ್ನೊಂದು ಸಲ ಯೋಚನೆ ಮಾಡಿ....ಅನ್ಯಾಯವಾಗಿ ಕೆಟ್ಟು ಹೋಗಬೇಡಿ; ನನ್ನೊಡನೆ ಬನ್ನಿ.

**ರಾಮ:**—(ನಕ್ಕು) ನೀವು ಹೋಗಿ. 'ರಾಮಲಿಂಗಯ್ಯನು ರಕ್ತಕಾರಿ ಕೊಂಡು ಪ್ರಾಣ ಬಿಟ್ಟ' ಎಂತ ಅರಿಕೆ ಮಾಡಿ. ಕತ್ತಲು ಕವಿದಿದೆ. ಹೊರಡಿ. ಸ್ವಾಮಿ! ಕಾಳಿ ಬಾಯಿಬಿಟ್ಟಾಳು. ಹೊರಡಿ. (ಅರ್ಚಕನು ಅಂಜುತ್ತಾ ಪ್ರಸಾದದ ತಟ್ಟೆಯನ್ನು ತೆಗೆದುಕೊಂಡು ಹೋಗುವನು.) ಜಗತ್ತಿನಲ್ಲಿ ಎಂತಹ ಹುಚ್ಚರಿದ್ದೇವೆ! ಏನು ಲೀಲೆ ತಾಯಿ! ನಿನ್ನದು! ನಿನ್ನ ಪೂಜೆ, ನಿನ್ನ ಧ್ಯಾನ, ಸಾಮಾನ್ಯವೆ?

(ಶ್ಯಾಮಲಾದಂಡಕವನ್ನು ಹಾಡುವನು)

(ತೆರೆ ಬೀಳುವುದು)

—

## ದೃಶ್ಯ ೨

[ರಾಮಲಿಂಗಯ್ಯನು ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ದೇವೀ ಸ್ತೋತ್ರ ಮಾಡುತ್ತ ಪ್ರವೇಶಿಸುವನು.]

(ಸ್ಥಳ: ಅರಣ್ಯದಲ್ಲಿ ಒಂದು ದಾರಿ.)

**ಕಾಮನಾಯಕ:**—(ಪ್ರವೇಶಿಸಿ ದೀರ್ಘ ದಂಡಪ್ರಣಾಮ ಮಾಡಿ) ನಾನು ಧನ್ಯ ನಾದೆ.

**ರಾಮಲಿಂಗ:**—(ನೇಪಥ್ಯದ ಕಡೆ ಕೈತೋರಿಸಿ) ಆ ತಾಯಿಗೆ ನೀನು ನಮಸ್ಕಾರ ಮಾಡಿದರೆ, ನಾವಿಬ್ಬರೂ ಧನ್ಯರಾಗುವೆವು. ನನ್ನಂತಹ ಅಲ್ಪನು ನಮಸ್ಕಾರಕ್ಕೆ ಅನರ್ಹನು.

**ಕಾಮನಾಯಕ:**—ತಾವು ಮಹಾತ್ಮರು.

**ರಾಮಲಿಂಗ:**—ಅಲ್ಲ. ಅಲ್ಲ. ಅಲ್ಲ. ನಾನೇ ಅಲ್ಲವೆಂದು ಹೇಳುತ್ತಿದ್ದರೂ ನೀನೊಬ್ಬ ನನಗೆ ಮಹಾತ್ಮನ ಪಟ್ಟವನ್ನು ಕಟ್ಟುತ್ತಿದ್ದೀಯೆ. ಈ ಬಗೆಯ ಕೋಲಾಹಲ ಇನ್ನು ಸಾಕು.

**ಕಾಮ:**— ಮಹಾಪ್ರಧಾನರು ತಮ್ಮ ವಿಚಾರವನ್ನು ಕೇಳಿ ಸುಪ್ರೀತ ರಾಗಿದ್ದಾರೆ.

ರಾಮ:—(ಕೈಕೊಡಹಿ) ಸುಪ್ರೀತರಾದರೆ! (ನಕ್ಕು) ಸಾಕು ಮಹಾ-ರಾಯಾ, ಈ ಸುಪ್ರೀತರಾಗುವ ಸುದ್ದಿ. ನಾನು 'ಪಾಂಡುರಂಗ ಮಾಹಾತ್ಮ್ಯ' ಎಂಬ ಗ್ರಂಥವನ್ನು ಬರೆದಾಗ ಸ್ವಲ್ಪ ದಿನ ನನ್ನ ಬುದ್ಧಿ ಕೆಟ್ಟುಹೋಗಿ ವಿಜಯನಗರಕ್ಕೂ ಬಂದಿದ್ದೆ. 'ಅವರು ಸುಪ್ರೀತರಾದರು' 'ಇವರು ಸುಪ್ರೀತ ರಾದರು' ಎಂದರೆ ಸಾಕು, ಎರಡು ಕಿವಿಗಳು ಇನ್ನೂರು ಕಿವಿಗಳಾಗಿ ಕೇಳಿ ಹಿರಿಹಿರಿ ಹಿಗ್ಗುತ್ತಿದ್ದೆ. ಅದೊಂದು ಮೋಹಸಿದ್ರೆ. ಅದೂ ಕಳೆದು ಎಚ್ಚರ ವಾಯಿತು. ಆ ತಾಯಿ, ಆ ಆದಿಶಕ್ತಿ ಅನುಗ್ರಹಮಾಡಿ ಎಚ್ಚರಿಸಿದಳು. ನೀನು ದಯಮಾಡಿ ಹೊರಟರೆ ಬಹಳ ಸಂತೋಷ.

ಕಾಮ:— ತಮ್ಮಲ್ಲಿ ಒಂದು ಪ್ರಾರ್ಥನೆ....

ರಾಮ:—ಪ್ರಾರ್ಥನೆ! ಓಹೋ ಪ್ರಾರ್ಥನೆಯೊ? (ವರದಾಭಯಹಸ್ತನಾಗಿ ನಿಂತು) ಇದೋ ವರ ಕೊಡಲು ಸಿದ್ಧನಾಗಿದ್ದೇನೆ. ವರವನ್ನು ಬೇಡಪ್ಪ. ಬೇಡಿಕೊಳ್ಳಯ್ಯ. ನಾನು ಭಗವಂತ, ನೀನು ಭಕ್ತ..ಅಯ್ಯೋ ದೇವರೇ! ಅರ್ಥವಿಲ್ಲದಂತೆ ಮಾತನಾಡುವ ಈ ದೊಡ್ಡ ದೊಡ್ಡ ಶಬ್ದಗಳೇಕಯ್ಯಾ?

ಕಾಮ:—ಪ್ರಾರ್ಥನೆಯನ್ನು ನಾನು ಮಾಡದಿದ್ದರೆ, ಮಹಾಪ್ರಧಾನರ ಆಗ್ರಹಕ್ಕೆ ಗುರಿಯಾಗಬೇಕಾಗುವುದು. ಪೂಜ್ಯರೆ! ಆದಕ್ಕಾದರೂ ನೀವು ನನ್ನ ಮಾತುಗಳನ್ನು ಲಾಲಿಸಬೇಕು. ತಾವು ಜಹಗೀರನ್ನು ಸ್ವೀಕರಿಸು ವಂತೆ ಪ್ರಾರ್ಥಿಸಬೇಕೆಂದು ಅಪ್ಪಣೆಯಾಗಿದೆ. ಮೂರು ದೊಡ್ಡ ಗ್ರಾಮ ಗಳನ್ನು ಮಹಾಪ್ರಧಾನರು ತಮಗೆ ಕೊಡುವವರಾಗಿದ್ದಾರೆ.

ರಾಮ:—ಭಲಾ! ಭಲಾ! ನನ್ನ ಬೆಲೆ ಸರಿಯಾಗಿ ಕಟ್ಟಿದ್ದೀರಿ. ತಡೆ ಯಪ್ಪಾ! ಬಣ್ಣ, ತೂಕ ಎಲ್ಲಾ ಸರಿಯಾಗಿದೆಯೋ? ನೋಡು. ನೋಡು. ಮೂರೇ ಗ್ರಾಮವೋ! ಮೂರೂವರೆಯೋ! ಮೂರೂಮುಕ್ಕಾಲೋ? ಅಲ್ಲಯ್ಯಾ! ನನ್ನ ಬೆಲೆ ಮೂರೇ ಗ್ರಾಮವೇನಯ್ಯಾ? ನನಗೆ ಬಹಳ ಆಶೆ. ದುರ್ದಮನೀಯವಾದ ಪ್ರಚಂಡವಾದ ಆಶೆ. ಅದು ತೀರುವಂತೆ ಗ್ರಾಮ ಗಳನ್ನು ಕೊಡಿಸುವ ಹಾಗಿದ್ದರೆ ಹೇಳು. ಅಗತ್ಯವಾಗಿ ಸ್ವೀಕರಿಸುವೆನು.

ಕಾಮ:—ಈಗ ಬಹಳ ಆತಂಕದ ಕಾಲ. ಸಾಮ್ರಾಜ್ಯದಲ್ಲಿ ಅಲ್ಲಲ್ಲಿ ದಂಗೆಗಳಾಗುತ್ತಿವೆ. ಉಲ್ಲೋಲ ಕಲ್ಲೋಲ ದೆಸೆಯೆಲ್ಲಿ ಒಂದು ಬಿಡುವುದೋ ಎಂದು ಭಯವಾಗಿದೆ. ಆದರೂ ತಮ್ಮ ಆಶೆ ಎಷ್ಟೆಂಬುದನ್ನು ತಿಳಿಸಿದರೆ, ಈ

ಕಾಮನಾಯಕನು ತನ್ನ ಶಕ್ತಿಮೀರಿ ತನ್ನ ಕೈಯಲ್ಲಾದುದನ್ನೆಲ್ಲಾ ಮಾಡುವನು.

**ರಾಮ**:—ಕೊಡಿಸುವ ಹಾಗಿದ್ದರೆ ಹಿಮವತ್ಪರ್ವತದಿಂದ ರಾಮೇಶ್ವರದ ವರೆಗಿರುವ ಪ್ರದೇಶವನ್ನು ಕೊಡಿಸು, ಮಹಾರಾಯ. ಹಿಮವತ್ಪರ್ವತ ವನ್ನೇ ನನ್ನದು ಮಾಡಿಕೊಂಡು ಕೈಲಾಸ ಶಿಖರದಲ್ಲಿ ನಿಂತು ಪಾರ್ವತೀ ಪರಮೇಶ್ವರರನ್ನು ಪ್ರಾರ್ಥಿಸಬೇಕು:

> ' ಹಿತ್ವಾತಸ್ಮಿನ್ ಭುಜಗವಲಯಂ ಶಂಭುನಾ ದತ್ತಹಸ್ತಾ ।
> ಕ್ರೀಡಾ ಶೈಲೇ ಯದಿ ಚ ವಿಚರೇತ್ಪಾದಚಾರೇಣ ಗೌರೀ ॥
> ಭಂಗೀ ಭಕ್ತ್ಯಾ ವಿರಚಿತವಪುಃ ಸ್ತಂಭಿತಾಂತರ್ಜಲೌಘಃ ।
> ಸೋಪಾನತ್ವಂ ಕುರು ಮಣಿತಟಾರೋಹಣಾಯಾಗ್ರಯಾಯಿೂ ' ॥

ಎಂದು ತಾರಸ್ವರದಲ್ಲಿ ಹಾಡಬೇಕು, ಅಲ್ಲಿ ಹೊರಳಬೇಕು, ಎಂದು ಆಶೆ. ಮಂಜಿನಿಂದ ಮೈಕೊರೆಯುತ್ತಿರುವಾಗ ದೇಹವನ್ನು ಮರೆತು ಧ್ಯಾನಮಾಡ ಬೇಕೆಂದು ಅಭಿಲಾಷೆ.

**ಕಾಮ**:— ಆಸೇತುಹಿಮಾಚಲದ ವರೆಗೆ ನಮ್ಮ ಚಕ್ರಾಧಿಪತ್ಯವೇ ಹರ ಡಿಲ್ಲ. ಹೀಗಿರುವಲ್ಲಿ ಈ ಆಶೆಯನ್ನು ಸಫಲಗೊಳಿಸುವುದು ಹೇಗೆ ? ಕೆಲವು ಗ್ರಾಮಗಳಾದರೆ ಕೊಡಬಹುದು.

**ರಾಮ**:—ಹೀಗಿದ್ದಮೇಲೆ ನನಗೆ ಭೂಮಿಯನ್ನು ಕೊಡುವಂತೆ ಆಶೆ ತೋರಿಸಿದುದೇಕೆ ? ನಿಮಗೇ ಇಲ್ಲದಿದ್ದವರು ನನಗೆ ಕೊಡುವುದೇನನ್ನು?

**ಕಾಮ**:—ಗ್ರಾಮಗಳ ಮಾತು ಹೋಗಲಿ. ತಾವು ಹಣವನ್ನಾದರೂ ಸ್ವೀಕರಿಸಬಹುದಲ್ಲಾ! ರಾಜಧಾನಿಗೆ ಬರಲು ಸಮ್ಮತಿಸಿ ಅನುಗ್ರಹಮಾಡ ಬೇಕು. ಇಲ್ಲವಾದಲ್ಲಿ ಮಹಾಪ್ರಧಾನರ ಎದುರಿಗೆ ನಮಗೆ ಅವಮಾನ ವಾಗುವುದು. ತಮ್ಮನ್ನು ಒಪ್ಪಿಸಲಿಲ್ಲವೆಂಬ ಆಕ್ಷೇಪಣೆಗೆ ನಾವು ಗುರಿ ಯಾಗುವೆವು. ಎಷ್ಟು ಹಣವನ್ನು ಸಲ್ಲಿಸೋಣ! ಅಪ್ಪಣೆಯಾಗಲಿ.

**ರಾಮ**:—(ನಕ್ಕು) ಅಣ್ಣಾ! ನಾನು ಬಹಳ ಕೆಟ್ಟ ಹುಳು. ನನ್ನ ಆಶೆಗೆ ಪಾರವೇ ಇಲ್ಲ. ಅದೇನೋ ಸ್ಪರ್ಶಮಣಿಯೆಂಬ ರತ್ನವಿದೆಯಂತೆ. ಅದು ನೋಕಿದ ಪದಾರ್ಥವೆಲ್ಲ ಚಿನ್ನವಾಗುತ್ತದಂತೆ. ಅದನ್ನು ತಂದುಕೊಡುವ ಹಾಗಿದ್ದರೆ ನೋಡಿ......ಕೇಳಿಲ್ಲವೇನಯ್ಯ, ' ಬದುಕಿಗೆ ಬ್ರಹ್ಮವಿದ್ಯೆ.

ಭೋಗಕ್ಕೆ ಸ್ವರ್ಣವಿದ್ಯೆ' ಎಂತ, ನೋಡಿ. ನನ್ನ ಈ ಆಶೆಯುನ್ನಾದರೂ ಪೂರ್ಣಮಾಡುವುದು ಸಾಧ್ಯವೆ—ಎಂದು ಯೋಚಿಸಿ ನೋಡಿ

**ಕಾಮ:**—ಪೂಜ್ಯರೆ! ಸ್ಪರ್ಶಮಣಿ ಎಂದರೇನು? ನಾವು ಎಂದರೇನು?

**ರಾಮ:**—ಇನ್ನು ಗ್ರಾಮದ ಮಾತೂ ಹಣದ ಮಾತೂ ಏಕೆ? (ನಕ್ಕು) ನನ್ನ ತಲೆಗೆ ಬೆಲೆ ಏಕೆ ಕಟ್ಟುತ್ತೀರಿ, ನಮ್ಮಪ್ಪ? ಕೊಡುವುದು ಬಿಡುವುದನ್ನೆಲ್ಲಾ ಆ ತಾಯಿಗೇ ವಹಿಸಿ ಆಕೆಯ ಕೈಯಲ್ಲಿರುವ ಮಾಣಿಕ್ಯವೀಣೆಯ ಮೆಟ್ಟಿಲುಗಳಾಗಿರೋಣ. ಅವರವರ ನಾದವನ್ನು ಅವರವರು ನುಡಿದು ಸಂಗೀತಾರ್ಥವನ್ನು ಸಮಗ್ರ ಮಾಡೋಣ.

**ಕಾಮ:**—ತಾವು ಮಹಾತ್ಮರು. ಮಹಾತ್ಮರು ಸ್ವಾಮಿ.

**ರಾಮ:**—ಹುಲುಮನುಜನಾದ ನನಗೆ ಆ ಪಟ್ಟವನ್ನು ಮಾತ್ರ ಕಟ್ಟಬೇಡಿ.

**ಕಾಮ:**—ಅಪ್ಪಣೆಯಾದರೆ ನಾನು ಹೊರಡುವೆನು. ತಾವು ಮಹಾಪ್ರಧಾನರಲ್ಲಿಗೆ ಬರುವುದಾದರೆ ನಾನು ಹೆಜ್ಜೆನಮಸ್ಕಾರ ಹಾಕಿಕೊಂಡು ತಮ್ಮನ್ನು ಕರೆದೊಯ್ಯುವೆನು.

**ರಾಮ:**—ಕಾಶೀಕ್ಷೇತ್ರಕ್ಕಾದರೂ ಹೋಗಿ. ಅಲ್ಲಿ ಮಾರುಮಾರಿಗೂ ಶಿವಲಿಂಗವಿರುವ ಪ್ರದೇಶವಿರುವುದೆಂದು ಕೇಳಿದ್ದೇನೆ. ಅಲ್ಲಾದರೂ ಹೆಜ್ಜೆ ನಮಸ್ಕಾರ ಹಾಕಿದರೆ ಪುಣ್ಯವುಂಟು. ಅಥವಾ ಇಲ್ಲಾದರೂ ಆ ತಾಯಿಗೆ ನಮಸ್ಕಾರ ಹಾಕಿ ಪುಣ್ಯವನ್ನು ಗಳಿಸಿ. ಸಲ್ಲದವರಿಗೆ ಮನ್ನಣೆ ತೋರುವುದು ಮಹಾಪಾಪ. ಕರ್ಣಾಟಕ ಸಾಮ್ರಾಜ್ಯದ ಮಹಾಪ್ರಧಾನರ ಬಳಿಗೆ ಒಂದು ನಾನು ಮಾಡುವುದೇನು? ನನ್ನಿಂದ ಅವರಿಗೆ ಏನೂ ಪ್ರಯೋಜನವಿಲ್ಲ. ವೃಥಾ ಕಾಲಹರಣ.

**ಕಾಮ:**—ಅಪ್ಪಣೆಯಾದರೆ ಹೊರಡುವೆನು (ರಾಮಲಿಂಗನಿಗೆ ನಮಸ್ಕಾರ ಮಾಡಿ ಹೋಗುವನು.)

(ತೆರೆಬೀಳುವುದು)

—

## ದೃಶ್ಯ ೩

[ಕಾಳಿಯ ದೇವಾಲಯ. ಅರ್ಚಕನು ಕಾಳೀ ವಿಗ್ರಹಕ್ಕೆ ಪುಷ್ಪಾಲಂಕಾರ ಮಾಡುತ್ತಿರುವನು ದೀವಿಗೆಗಳು ಬೆಳಗುತ್ತಿವೆ. ವೇಶ್ಯೆಯು ಹೂ ಹಣ್ಣುಗಳ ತಟ್ಟೆಯೊಡನೆ ಪ್ರವೇಶಿಸುವಳು]

**ವೇಶ್ಯೆ:**—ಸ್ವಾಮಿ! ಸ್ವಲ್ಪ ಮಂಗಳಾರತಿಯನ್ನು ಮಾಡಿಕೊಡುತ್ತೀರಾ? (ತಟ್ಟೆಯನ್ನು ಇರಿಸುವಳು)

ಅರ್ಚಕ:—ಇದಕ್ಕೇನು. (ಅರ್ಚಕನು ಕಾಯೊಡೆದು ಕರ್ಪೂರ ಹೊತ್ತಿಸಿ ಮಂಗಳಾರತಿ ಮಾಡುವನು. ವೇಶ್ಯೆಯು ಹಾಡುವಳು. ಹಾಡು ಮುಗಿದ ಮೇಲೆ (ಸ್ವಗತ) ನೇವೇದ್ಯಕ್ಕೆ ಅಣಿಮಾಡಬೇಕು. ಪಾಪ! ಆ ರಾಮಲಿಂಗಯ್ಯನವರು ಹಸಿದಿದ್ದಾರೆ. ಅವರಿಗೂ ಏನಾದರೂ ಸ್ವಲ್ಪ ತರಬೇಕು. ಜಾಗ್ರತೆ ಬಂದರಾಯಿತು. (ಹೋಗುವನು)

**ವೇಶ್ಯೆ:**—(ಅರ್ಚಕನು ಹೋದ ಮೇಲೆ ಸುತ್ತಲೂ ನೋಡಿ ಯಾರೂ ಇಲ್ಲವೆಂದು ನಿರ್ಧರಿಸಿ) ಪ್ರಧಾನಸಚಿವರಾದ ಅಪ್ಪಾಜಿಯವರ ಅನುಜ್ಞೆಯಂತೆ ನನ್ನ ಜಾಣ್ಮೆಯಿಂದ, ರಾಮಲಿಂಗಯ್ಯನವರನ್ನು ವಶಪಡಿಸಿಕೊಳ್ಳಲು ಊರ ಹೊರಗಣ ಈ ದೇವಾಲಯಕ್ಕೆ ಬಂದುದಾಯಿತು. ಅವರಿನ್ನೂ ಇಲ್ಲಿಗೆ ಬಂದಿರುವುದಿಲ್ಲ. ಯಾವಾಗ ಬರುವರೋ ಏನೋ! ಇನ್ನೂ ಎಷ್ಟು ಹೊತ್ತು ನಿರೀಕ್ಷಿಸಬೇಕಾಗಿರುವುದೊ? (ನೇಪಥ್ಯದ ಕಡೆ ನೋಡಿ ಆಲಿಸುವಳು ದೂರದಿಂದ ಹಾಡದ ಶಬ್ದವು ಕೇಳಿಬರುವುದು) ಅದೋ ಬಂದರು.

(ಹಾಡುವಳು)

(ನೇಪಥ್ಯದಲ್ಲಿ ಹಾಡಿನ ಧ್ವನಿಯಾಗುವುದು)

(ರಾಮಲಿಂಗಯ್ಯ ಪ್ರವೇಶಿಸುವನು)

**ವೇಶ್ಯೆ:—ಮಾರ್ಗೇ ಮಾರ್ಗೇ ನೂತನಂ ಚೂತಖಂಡಂ ।**
**ರಾಮ:—ಮಾರ್ಗೇ ಮಾರ್ಗೇ ಜಾಯತೇ ಸಾಧು ಸಂಘಃ ।**
**ವೇಶ್ಯೆ:—ಖಂಡೇ ಖಂಡೇ ಕೋಕಿಲಾನಾಂ ವಿರಾವಃ**
**ರಾಮ:—ಸಂಗೇ ಸಂಗೇ ಶ್ರೂಯತೇ ಕೃಷ್ಣ ಕೀರ್ತಿಃ**
**ವೇಶ್ಯೆ:—ರಾವೇ ರಾವೇ ಮಾನಿನೀ ಮಾನಭಂಗಃ**
**ರಾಮ:—ಕೀರ್ತೌ ಕೀರ್ತೌ ನಷ್ಟದಾಕಾರ ವೃತ್ತಿಃ ॥**

**ವೇಶ್ಯೆ:**—ಭಂಗೇ ಭಂಗೇ ಮನ್ಮಥಃ ಪಂಚಬಾಣಃ

**ರಾಮ:**— ವೃತ್ತೌ ವೃತ್ತೌ ಸಚ್ಚಿದಾನಂದ ಭಾಸಃ

**ವೇಶ್ಯೆ:**—(ಓರೆನೋಟದಿಂದ) ರಂಭಾ ಶುಕಸಂವಾದದ ಶ್ಲೋಕ ಹೇಳೋಣ ಎನ್ನಿಸಿತು, ಹೇಳಿದೆ.

**ರಾಮ:**—ನನಗೂ ಉತ್ತರ ಕೊಡೋಣವೆನ್ನಿಸಿತು, ಭಗವಾನ್ ಶುಕ ಮಹರ್ಷಿಗಳ ಮಾತುಗಳನ್ನೇ ಹೇಳಿದೆ.

**ವೇಶ್ಯೆ:**—( ತನ್ನ ಕೈಲಿದ್ದ ದೊಡ್ಡ ಬೆಳ್ಳಿಯ ಸ್ಥಾಲಿಯನ್ನು ಅವನಿಗೊಪ್ಪಿಸಿ ) ಇದರಲ್ಲಿ ಹಾಲಿದೆ ಸ್ವೀಕರಿಸಬೇಕು.

**ರಾಮ:**—(ಸ್ವೀಕರಿಸಿ ದೇವಿಯ ವಿಗ್ರಹದ ಕಡೆ ತಿರುಗಿ) ತಾಯೆ ! ನಿನ್ನ ಕೃಪೆಯು ಅಮೋಘವಾದುದು ! ನಿನ್ನೆ ರಾತ್ರಿ ನನ್ನನ್ನು ಭಕ್ತಿಸಿಂಧುವಿನಲ್ಲಿ ಓಲಾಡಿಸಿ ಆನಂದಪಡಿಸಿದೆ. ಇಂದು ಈ ರೂಪದಲ್ಲಿ ಬಂದು ಹಾಲನ್ನು ಕೊಟ್ಟು ಉಪಕರಿಸಿದೆ. (ಕುಡಿಯುವನು)

**ವೇಶ್ಯೆ:**—ತಾವು ಅದನ್ನು ಸ್ವೀಕರಿಸಿದುದರಿಂದ ನನ್ನ ಜನ್ಮವೇ ಸಾರ್ಥಕ ವಾಯಿತು.

**ರಾಮ:**—ಜನ್ಮ ಸಾರ್ಥಕವಾಗುವುದು ಅಷ್ಟು ಸುಲಭವಲ್ಲವಮ್ಮ. ತಾಯಿ, ಬಹಳ ರುಚಿಯಾದ ಹಾಲನ್ನು ತಂದುಕೊಟ್ಟೆ. ನನಗೆ ಇನ್ನೂ ಕೆಲವು ಕಾಲ ಭೂಋಣಾನುಬಂಧವಿದೆಯೆಂದೂ, ನಾನು ಮೃತನಾಗುವುದು ತಾಯಿಗೆ ಇನ್ನೂ ಇಷ್ಟವಿಲ್ಲವೆಂದೂ ಭಾವಿಸಿ ಅದನ್ನು ನಾನು ಕುಡಿದೆನಮ್ಮ. ಇಲ್ಲಿಗೆ ಹಾಲು ತರಲು ನಿನಗೆ ಹೇಗೆ ಪ್ರೇರಣೆ ಹುಟ್ಟಿತೋ ನಾನರಿಯೆ ತಾಯೆ !

**ವೇಶ್ಯೆ:**—ತಾವು ನನ್ನನ್ನು 'ಅಮ್ಮಾ ! ತಾಯಿ !' ಎಂದು ಸಂಬೋಧಿಸಬಾರದು.

**ರಾಮ:**—ಹಾಗೆಂದರೆ ? ತಾಯಿಯಂತೆ-ತಾಯಿಯಿಂದ ಪ್ರೇರಿತಳಾಗಿ-ಹಾಲು ತಂದುಕೊಟ್ಟಿದ್ದೀಯೆ. ತಾಯಿಯೆನ್ನಕೂಡದೇನಮ್ಮ ?

**ವೇಶ್ಯೆ:**—(ಅಸಹ್ಯವನ್ನು ಸೂಚಿಸಿ ಕಿವಿಗಳನ್ನು ಮುಚ್ಚಿಕೊಂಡು) ಅಯ್ಯೋ ! ಹೋಗಲಿ....ಹಾಗೆನ್ನಬೇಡಿ.......ನಾ..ನು..ನ..ನ್ನ..ಆಶಯವೇ ಬೇರೆ....ನನ್ನ ಆಶೆಯೇ ಬೇರೆ......

( ಅರ್ಚಕನು ಒಂದು ಕೈಯಲ್ಲಿ ಹೂವಿನ ಬುಟ್ಟಿಯನ್ನೂ ಮತ್ತೊಂದರಲ್ಲಿ ಹುಗ್ಗಿ ಎರೆಯಪ್ಪಗಳು ಮುಂತಾದವುಗಳಿರುವ ಪಾತ್ರೆಯ ಗಂಟನ್ನೂ ತೆಗೆದುಕೊಂಡು ಪ್ರವೇಶಿಸುವನು. ಒಳಗೆ ಬರುವಷ್ಟರಲ್ಲಿ ವೇಶ್ಯೆ ಇರುವುದನ್ನು ಕಂಡು ಹಿಂದಕ್ಕೆ ಹೆಜ್ಜೆಗಳನ್ನಿಟ್ಟು "ಹೀಗೋ! ಇವರು ಹಸಿದಿರುವರೆಂದು ಹುಗ್ಗಿ ಎರೆಯಪ್ಪಗಳನ್ನು ಬೇರೆ ನಾನು ಹೊತ್ತು ತಂದೆ. ಹೀಗೆ ಸಾಧುಗಳಾಗಿರುವುದಕ್ಕಿಂತ ನನ್ನ ಹಾಗೆ ಸಂಸಾರಿಯಾಗಿರುವುದೇ ಮೇಲು. ದೇವಸ್ಥಾನ ಅಪವಿತ್ರವಾಯಿತು. ಇರಲಿ ಎಲ್ಲಿಗೆ ಬರುವದೋ ನೋಡುವೆನು" ಎಂದು ಮರೆಯಲ್ಲಿ ನಿಲ್ಲುವನು.)

**ರಾಮ:**—ಇದೇನು? ನಿನ್ನ ಅರ್ಧ ಮಾತುಗಳ ಸುರಿಮಳೆ ನನಗೆ ಒಂದೂ ಅರ್ಥವಾಗುವುದಿಲ್ಲ.

**ವೇಶೆ:**—ದೇವಸ್ಥಾನದ ಹೊರಗೆ ಸ್ವಲ್ಪ ದೂರದಲ್ಲಿ ನನ್ನ ಮೇನವು ಸಿದ್ಧವಾಗಿದೆ. ತಾವು ನನ್ನೊಡನೆ ಬಂದರೆ ಅರ್ಥವಾಗುವಂತೆ ಮಾತನಾಡುವೆನು.

**ರಾಮ:**—ನಾನು ಎಲ್ಲಿಗೆ ಬರಬೇಕು?

**ಅರ್ಚಕ:**—( ಜನಾಂತಿಕವಾಗಿ ) ವೇಶ್ಯಾವಾಟಿಯ ವಿಹಾರಸ್ಥಾನಕ್ಕೆ, ಇನ್ನೆಲ್ಲಿಗೆ?

**ವೇಶ್ಯೆ:**—(ಮುಗುಳು ನಗೆಯಿಂದ) ನಮ್ಮ ಮನೆಗೆ.

**ರಾಮ:**— ನಿಮ್ಮ ಮನೆಗೆ?

**ವೇಶ್ಯೆ:**—ನಮ್ಮ ಮನೆಗೆ. ನನ್ನ ಐಶ್ವರ್ಯವನ್ನೆಲ್ಲಾ ತಮಗೊಪ್ಪಿಸಿ ತಮ್ಮ ದಾಸಿಯಾಗುವೆನು.

**ಅರ್ಚಕ:**—(ಜನಾಂತಿಕವಾಗಿ) ಸರಿಯಾದ ಯೋಚನೆ.

**ರಾಮ:**—ಪ್ರತಿಫಲಾಪೇಕ್ಷೆಯಿಲ್ಲದೆ ನಿಷ್ಕಾಮ ಕರ್ಮವು ಸಾಮಾನ್ಯವಾಗಿ ನಡೆಯುವುದಿಲ್ಲ. ಅದಕ್ಕೆ ನೀನು ಸಿದ್ಧಳಾಗಿದ್ದರೆ, ನೀನು ತಾಯಿಯ ಅಂಶಸಂಭೂತಳು.

**ವೇಶ್ಯೆ:**—ನಾನು ಅಷ್ಟು ದೊಡ್ಡ ಮಾತಿಗೆ ಅನರ್ಹಳು. ನನ್ನ ಆಶಯವೇ ಬೇರೆ. ನಾವು ಅಪ್ಸರೆಯ ಕುಲದವರು.

**ರಾಮ:**—ಓಹೋ! ಹಾಗೋ! ನೀವು ದೇವಲೋಕದವರು. ಸದ್ಯಕ್ಕೆ ಮನುಷ್ಯಲೋಕದಲ್ಲಿ ವಾಸ. ಸರಿ ಸರಿ. ಈಗ ಇಲ್ಲಿಯವರೆಗೂ ಬಂದ ಕಾರಣ?

**ವೇಶ್ಯೆ**:—ನಮ್ಮ ದೇಶಕ್ಕೆ ಭರತಖಂಡವೆಂಬ ಹೆಸರು ಬಂದಿರುವುದೇ ನಮ್ಮ ಕುಲದಿಂದ; ನಮ್ಮ ಕುಲದ ಶಕುಂತಲೆಯು ಮಗನಾದ ಭರತನಿಂದ. ಹಿಂದೆ ನಮ್ಮ ಅಪ್ಸರೆಯು ಕುಲದವಳಾದ ಮೇನಕೆಯು ಮಹಾ ತಪಸ್ವಿಗಳಾಗಿದ್ದ ವಿಶ್ವಾಮಿತ್ರ ಮಹರ್ಷಿಗಳ ಅನುಗ್ರಹಕ್ಕೆ ಪಾತ್ರಳಾಗಿ ಶಕುಂತಲೆಯೆಂಬ ಕನ್ಯಾರತ್ನವನ್ನು ಪಡೆದಳಂತೆ.

**ರಾಮು**:—ಹೌದಂತೆ. ಮಾತೃವಾತ್ಸಲ್ಯವನ್ನು ತೊರೆದು ಆ ಮಗುವನ್ನು ಮರದ ಕೆಳಗೆ ಮಲಗಿಸಿ ಸ್ವರ್ಗಲೋಕಕ್ಕೆ ಹಾರಿದಳಂತೆ. ಆ ಮಗುವಿನ ಪೋಷಣೆಯು ಪೂಜ್ಯರಾದ ಕಣ್ವರ ಕೊರಳಿಗೆ ಕಟ್ಟಿತಂತೆ.

**ವೇಶ್ಯೆ**:—(ಶೃಂಗಾರ ಚೇಷ್ಟೆಯಿಂದ) ತಾವು ಧರ್ಮಾತ್ಮರು. ಮೇನಕೆಯಂತೆ ನಾನೂ ಭಾಗ್ಯವತಿಯಾಗಲು ಆಸೆ. ಆಕೆ ವಸಂತಋತುವಿನಲ್ಲೊಂದು ದಿನ ಆತನನ್ನು ನೋಡಿ......

**ರಾಮು**:—ಓಹೋ! ನನಗೆ ಶಾಕುಂತಲ ನಾಟಕವನ್ನು ಪಾಠ ಹೇಳುವಂತಿದೆ! ಭಲಾ! ಭಲಾ! ನಡೆಯಲಿ. ನಡೆಯಲಿ. ಗುರುಗಳಿಂದ ಅಭಿಜ್ಞಾನ ಶಾಕುಂತಲ ನಾಟಕ ಪಾಠ! ನಾನೊಬ್ಬ ಕಾಡು ಮನುಷ್ಯ. ಈ ಅಲಂಕಾರದ ಮಾತುಗಳೇ ನನಗೆ ಅರ್ಥವಾಗುವುದಿಲ್ಲ.

**ವೇಶ್ಯೆ**:—ನನ್ನ ಆಶಯವು ಅರ್ಥವಾಗುವುದಿಲ್ಲವೆ? ನಾನು ಬೇಡುವುದು ಪ್ರೇಮಭಿಕ್ಷೆ.

**ರಾಮು**:—ಓಹೋಹೋ! ಇಷ್ಟೆ? ಸರಿ ಸರಿ. ಹೆಣ್ಣಿನ ಆಶೆ. ಹೆಣ್ಣಿನ ಆಶೆ.

**ಅರ್ಚಕ**:—ಸರಿ ಸರಿ.

**ವೇಶ್ಯೆ**:—ನಾನು ಧನ್ಯಳು! ಪ್ರಿಯನೇ, ಈ ಶ್ಲೋಕವನ್ನು ಕೇಳು.

**‘ಸುಗಂಧೈ ಸುಪುಷ್ಪೈ ಸ್ಸುಶಯ್ಯಾ ಸುಕಾಂತಾ |**
**ವಸಂತೋಋತುಃ ಪೂರ್ಣಿಮಾ ಪೂರ್ಣಚಂದ್ರಃ ||**
**ಯದಾ ನಾಸ್ತಿ ಪುಂಸ್ತ್ವಂ ನರಸ್ಯ ಪ್ರಭೂತಂ |**
**ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ’ ||**

**ರಾಮು**:—ಈಗ ವಸಂತಕಾಲವೂ ಅಲ್ಲ; ಹುಣ್ಣಿಮೆಯ ಪೂರ್ಣಚಂದ್ರನೂ ಇಲ್ಲ. ಸುಗಂಧವೂ ಬೇಡ. ಸುಪುಷ್ಪವೂ ಬೇಡ. ಹೊರಡು

ತಾಯಿ. ನೀನು ಬಂದು ಬಹಳ ಹೊತ್ತಾಯಿತು. ಅತ್ತ ನೋಡು (ನೇಪಥ್ಯದ ಕಡೆ ಕೈ ತೋರಿಸಿ) ಆ ದೊಡ್ಡ ಬೆಳಕಿಂಡಿಯಿಂದ ನೋಡು. ಸೂರ್ಯದೇವನು ಅಸ್ತಮಿಸುತ್ತಿದ್ದಾನೆ.

**ವೇಶ್ಯೆ:**—ನೀವು ರಸಿಕರಲ್ಲ.

**ರಾಮ:**—ಅದು ತಿಳಿಯಬೇಕಾದರೆ ಇಷ್ಟು ಹೊತ್ತಾಯಿತೆ? ನಾನು ರಸಿಕನೆಂದು ಎಂದೂ ಯಾರ ಕೈಯಲ್ಲಿಯೂ ಹೇಳಿರಲಿಲ್ಲವಮ್ಮ. ಹೇಳಿದ್ದೆನೆ? ಹೇಳಿದ್ದೆನೆ? ಯಾರೊಡನೆಯಾದರೂ ಹೇಳಿದ್ದೇನೆ? ಸುತರಾಂ ಹೇಳಿದ್ದಂತೆ ನೆನಪಿಲ್ಲ.

**ವೇಶ್ಯೆ:**—ಪ್ರೀತಿಸುವೆನೆಂದಿರಿ? ನಿಮ್ಮ ಮನಸ್ಸು ಪ್ರೇಮರಾಶಿಯಾಗ ಬೇಕೆಂದು ನಿಮ್ಮ ಆಸೆಯೆಂದಿರಿ?

**ರಾಮ:**—ಹಾಗೆಂದಂತೆ ನೆನಪಿಲ್ಲ. ಆದರೂ ಹಾಗೆಂದಿದ್ದರೆ ತಪ್ಪಿಲ್ಲ. ನಾನು ನಿನ್ನನ್ನು ಪ್ರೀತಿಸುವೆನು. ನನ್ನ ಮನಸ್ಸು ಪ್ರೇಮರಾಶಿಯಾಗ ಬೇಕೆಂದು ನನ್ನ ಆಸೆಯಿರುವುದೂ ನಿಜ.

**ವೇಶ್ಯೆ:**—ಮತ್ತೆ?

**ರಾಮ:**—(ಕೈಗಳನ್ನು ಅಲ್ಲಾಡಿಸಿ) ಮತ್ತೆ ಮತ್ತೆ, ಏನೂ ಇಲ್ಲ ಅಷ್ಟೆ.

**ವೇಶ್ಯೆ:**—ನಾನಾಗಿಯೇ ಕಾಮಿಸಿ ಬಂದಿದ್ದೇನೆ, ಪ್ರಣಯಭಿಕ್ಷೆಯನ್ನು ಸಲ್ಲಿಸಲಾರಿರಾ?

**ರಾಮ:**—ತಾಯಿ! ಇಲ್ಲಿ ನೋಡು. ಸೂರ್ಯಬಿಂಬವು ದಿಗಂತದ ಕಡೆಗಿಳಿಯುತ್ತಿದೆ. ಕೆಂಪಿನ ರಸದ ಕಾಂತಿಯನ್ನು ಮುಕ್ಕಳಿಸುವ ಮೋಡದ ತುಂಡುಗಳು, ಮನುಷ್ಯಲೋಕದ ಯಾವ ಚಿತ್ರಗಾರನ ಊಹೆಗೂ ಸಿಕ್ಕದ ದಿವ್ಯಶೋಭೆಯ ವಿವಿಧ ವರ್ಣರಂಜಿತಗಳಾದ ಮೋಡಗಳೂ ರಾರಾಜಿಸು ತ್ತಿವೆ. ಕ್ಷಣಕ್ಷಣಕ್ಕೂ ಬೇರೆ ಬೇರೆ ಬಣ್ಣಗಳು!

**ವೇಶ್ಯೆ:**—ನಿಜ. ಬಹಳ ಚೆನ್ನಾಗಿದೆ. ಬಹಳ ಸೊಗಸಾಗಿದೆ.

**ರಾಮ:**—ಅತ್ತ ನೋಡು, ಎಲೆಗಳೆಲ್ಲಾ ಉದುರಿಹೋಗಿರುವ ಬರಿಯ ಮರವೊಂದು ತನ್ನ ಬರಿಯ ಕೊಂಬೆಗಳನ್ನು ಸೂರ್ಯಬಿಂಬದ ಎದುರಿಗೆ ಹಿಡಿದು ಸಮಾಧಿಮಗ್ನನಾದ ಹಿರಿಯ ತಪಸ್ವಿಯಂತೆ ಬಲು ದೂರದಲ್ಲಿ ನಿಂತಿದೆ.

**ವೇಶ್ಯೆ**:—ಪೂಜ್ಯರೆ! ನಾನು ಪ್ರೀತಿಭಿಕ್ಷೆಯನ್ನು ಬೇಡಿದರೆ, ಕವಿಗಳಾಗಿ ವರ್ಣನೆಗಾರಂಭಿಸಿದಿರಿ.

**ರಾಮು**:—ಇರಲಿ. ಅತ್ತ ನೋಡು, ನಭೋಮಂಡಲದಲ್ಲಿ ಯಾವ ಬಣ್ಣಗಳು ಎಷ್ಟು ಬಗೆಗಳಲ್ಲಿ ಮಾರ್ಪಟ್ಟರೂ ಎಲೆಗಳಿಲ್ಲದ ಆ ಮರವು ಅಷ್ಟೂ ಇಷ್ಟು ಪ್ರಶಾಂತವಾಗಿ, ನಿಶ್ಚೇಷ್ಟಿತವಾಗಿ ನಿಂತಿದೆ.

**ವೇಶ್ಯೆ**:—ಸರಿ ಸರಿ.

**ರಾಮು**:—ಸರಿಯೋ, ಬೆಸವೋ. ಸರಿ-ಬೆಸಗಳು ಹಾಗಿರಲಿ. ಆ ಒಣ ಮರದ ಹಾಗಾಗಬೇಕೆಂದು ನನಗೆ ಆಸೆ. ಆ ಮೋಡಗಳ ಹಾಗಿರಬೇಕೆಂದು ನಿನಗೆ ಆಸೆ.

**ವೇಶ್ಯೆ**:—ಎಂದರೆ?

**ರಾಮು**:—ಅರಿವರ್ಗಗಳ ದಾಂಧಲೆಯಿಂದ ಹುಟ್ಟಿದ ಬಗೆಬಗೆಯ ವೃತ್ತಿಗಳೂ ಹಣ್ಣೆಲೆಗಳಂತೆ ಉದುರಿಹೋಗಿ ರಾಗರಂಜಿತವಾದ ಬಗೆಬಗೆಯ ಯಾವ ಸನ್ನಿವೇಶಗಳು ಒದಗಿದರೂ ನನ್ನ ಮನಸ್ಸು ನಿರ್ವಿಕಾರವಾಗಿ ಈ ಮರದಂತೆ ಆಗಬೇಕೆಂದು ನನಗೆ ಆಸೆ. ನಿನಗೆ ರಾಗದ ಮಡುವಿನಲ್ಲಿ ಮುಳುಗಿ, ಜೀವನ-ಪ್ರವಾಹದಲ್ಲಿ ಭೋಗದ ತೆರೆಗಳೊಡನೆ ಈಜುತ್ತ, ಆ ಮೋಡಗಳಂತೆಯೇ ಇರಬೇಕೆಂದು ಆಸೆ. ನಮ್ಮಿಬ್ಬರಿಗೂ ಜೋಡಿಯೆಲ್ಲಿ?

**ವೇಶ್ಯೆ**:—ನನ್ನ ಮನಸ್ಸೇ ಒಂದು ಬಗೆಯಾಗುತ್ತಿದೆ. ಏನೋ ಭಯ.. ಏನೋ ಕಳವಳ.. ಪೂಜ್ಯರೆ, ತಾವು ನನಗೆ ಪ್ರೀತಿಭಿಕ್ಷೆಯನ್ನು ಕರುಣಿಸಿ, ನನ್ನನ್ನು ನಿಮ್ಮವಳನ್ನಾಗಿ ಮಾಡಿಕೊಳ್ಳಿ. ಶುದ್ಧ ಪ್ರೇಮದಿಂದ ತಮ್ಮನ್ನು ಸೇವಿಸಲು ನನಗೆ ಆಶೆ.

**ರಾಮು**:—ಅವಶ್ಯವಾಗಿ ಆಗಬಹುದು.

**ಅರ್ಚಕ**:—ಇದೇನು ಬಂತು ಮತ್ತೆ ಕೇಡು! ಸರಿಯೆ, ಸರಿಯೋ ತಾನೆ!

**ವೇಶ್ಯೆ**:—(ಸಡಗರದಿಂದ) ನಾನು ಧನ್ಯಳು! ನನ್ನ ಮನೆಗೆ ಹೋಗೋಣ.

**ರಾಮು**:—ನೀನು ಸಕಲ ಕಲಾಪ್ರೌಢೆಯಾಗಿರಬಹುದು. ನಿನಗೆ ಈಜು ಬರುವುದೇ?

**ಅರ್ಚಕ:**—(ಜನಾಂತಿಕವಾಗಿ) ಭಕ್ತರಿಗೆ ಈಗ ಜಲಕ್ರೀಡೆಯಲ್ಲಿ ಆಸಕ್ತಿ.

**ವೇಶ್ಯೆ:**—(ಸಡಗರದಿಂದ) ಚೆನ್ನಾಗಿ, ಚೆನ್ನಾಗಿ ಈಜಬಲ್ಲೆ.

**ರಾಮ:**—ನೀನು ನನ್ನನ್ನು ಶುದ್ಧಪ್ರೇಮದಿಂದ ಸೇವಿಸುವೆಯಲ್ಲವೆ?

**ಅರ್ಚಕ:**--(ಸ್ವಗತ) ಅಲ್ಲವೇ ಮತ್ತೆ !

**ವೇಶ್ಯೆ:**—(ಉತ್ಸಾಹದಿಂದ) ತ್ರಿಕರಣಶುದ್ಧವಾಗಿ.

**ರಾಮ:**—ನಾವಿಬ್ಬರೂ ಜಗತ್ತನ್ನೆಲ್ಲ ಮರೆತವರಂತೆ ಇಲ್ಲಿ ತುಂಗಭದ್ರೆಯಲ್ಲಿ ಈಜಿಕೊಂಡು ಹೋಗೋಣ. ಆಮೇಲೆ ಉಳಿದ ಮಾತು.

**ವೇಶ್ಯೆ:**—(ಬೆಚ್ಚಿ) ಈ ಪ್ರದೇಶದಲ್ಲಿ ತುಂಗಭದ್ರೆಯ ಸೆಳವು ಹೆಚ್ಚು. ಮಡುಗಳ ಸುಳಿಗಳೂ ಇವೆ. ಆ ಮಡುವಿನಲ್ಲಿ ಲೆಕ್ಕವಿಲ್ಲದಷ್ಟು ಮೊಸಳೆಗಳಿವೆ. ಪ್ರಿಯನೆ, ತುಂಗಭದ್ರೆಯ ಬೇರೊಂದು ಕಡೆಗೆ ಹೋಗಿ ಈಜೋಣ. ಜಲಕ್ರೀಡೆಯಲ್ಲಿ ನನಗೂ ಆಸೆ. ಈ ಪ್ರದೇಶದಲ್ಲಿ ಮಡುಗಳೂ ಸುಳಿಗಳೂ ಇರುವುದು ತಿಳಿಯದೆ?

**ರಾಮ:**—ತಿಳಿದಿದೆ. ಅದಕ್ಕೇ ಹೇಳಿದೆ. ಅದೇನೋ ಶುದ್ಧಪ್ರೇಮ, ತ್ರಿಕರಣ ಶುದ್ಧಿ....ಎಂತ ಏನೇನೊ ಹೇಳಿದೆಯಲ್ಲ. ನಾವಿಬ್ಬರೂ ಆನಂದವಾಗಿ ಈಜಿಕೊಂಡು ಹೋಗೋಣ. ಆ ಮಡುವಿನ ಬಳಿಗೆ ಹೋದಾಗ ಶುದ್ಧಪ್ರೇಮದಿಂದ, ತ್ರಿಕರಣಶುದ್ಧವಾಗಿ ಒಬ್ಬರನ್ನೊಬ್ಬರು ಆಲಂಗಿಸಿಕೊಳ್ಳೋಣ.

**ವೇಶ್ಯೆ:**— ಅಯ್ಯೋ ! ಮೊಸಳೆಗಳು ಬಂದರೆ?

**ರಾಮ:**— ಬರಲಿ. ಮೊಸಳೆಗಳು ಖಂಡಗಳನ್ನು ಕೀಳುತ್ತಿದ್ದರೆ, ತೋಳತೆಕ್ಕೆಯಲ್ಲಿ 'ಆನಂದ! ಆನಂದ! ಲೋಕಮಾತೆಯ ಅನುಗ್ರಹ!' ಎಂದುಕೊಳ್ಳುತ್ತ ಮತ್ತಷ್ಟು ಬಿಗಿದಪ್ಪಿಕೊಳ್ಳೋಣ. ಹಿಂಸೆಯಲ್ಲಿ ಆನಂದವನ್ನು ಕಂಡು ಹಿಂಸೆಯ ಭಯದಿಂದ ಪಾರಾಗೋಣ. ರಕ್ತಮಾಂಸಗಳು ಮೊಸಳೆಗಳ ಪಾಲಾದಾಗ, ಬಿಗಿದಪ್ಪಿರುವ ನಮ್ಮ ಅಸ್ಥಿಪಂಜರಗಳು ಸುಳಿಯಲ್ಲಿ ಗಿರಗಿರನೆ ತಿರುಗುತ್ತಿರುವಲ್ಲಿ ನಮ್ಮ ಅಂತರಾತ್ಮಗಳು ಕಾಳಿಯ ಪದತಲವನ್ನು ಸೇರಿ 'ತಾಯೇ! ನಿನ್ನ ಉಗ್ರ ರೂಪದ ವಿಲಯನೃತ್ಯವು ಈ ಅಸ್ಥಿಪಂಜರಗಳ ಮೇಲೆ ನಡೆಯಲಿ' ಎಂದು ಬೇಡೋಣ. ದೇವಿಯ ಕ್ರೌರ್ಯವೂ ಕರುಣೆ

ಯೆಂದು ನಮ್ಮ ಅಂತರಾತ್ಮಗಳು ಕುಣಿದಾಡಲಿ. ಯಾತನೆಯು ಸಹಿಯನ್ನು ಅನುಭವಿಸಿ ನಮ್ಮ ಚಿತ್ತಗಳು ನಲಿದಾಡಿ ಒಂದಾಗಲಿ!

**ವೇಶ್ಯೆ:**—(ಬಿರುಗಣ್ಣುಗಳಿಂದ ಕೂಡಿ ಬೆದರಿ) ಪೂಜ್ಯರೆ! ಸಾಕು ಸಾಕು! ಭಯದಿಂದ ನಡುಗುವಂತಾಗುತ್ತಿದೆ.

**ರಾಮ:**— ಭೀತಿಯಲ್ಲಿ ಪ್ರೀತಿಗೆ ಎಡೆಯುಂಟೆ? ನಿನ್ನ ರೂಪವು ಅಮೋಘವಾಗಿದೆ. ಇದರ ಜೊತೆಗೆ ನಿನ್ನ ಗುಣವೂ ಅಮೋಘವಾದರೆ? ಕಾಮತೃಷ್ಣೆಗೆ ಬದಲು ಆತ್ಮೋದ್ಧಾರವನ್ನು ಬಯಸಿದರೆ?

**ಅರ್ಚಕ:**—(ಜನಾಂತಿಕವಾಗಿ) ನಾನು ಪಾಪಿ! ಮಹಾತ್ಮರನ್ನು ನಿಂದಿಸಿದೆ.

**ವೇಶ್ಯೆ:**—(ಗಳಗಳನೆ ರೋದಿಸಿ) ಪೂಜ್ಯರೆ, ಅನೇಕ ಮಂದಿ ವಿಟರು ಬಂದುಹೋದರು. ಆದರೆ ಹೀಗೆ ನನ್ನ ಉದ್ಧಾರದ ವಿಚಾರವನ್ನೆತ್ತಿದವರೇ ಇಲ್ಲ.

**ರಾಮ:**—(ನಗುತ್ತ) ಈ ಸಣ್ಣ ವಿಚಾರಕ್ಕೆ ಅಳುವುದೇಕೆ, ತಾಯಿ? ನನ್ನಂತಹ ವಿಟನು ಬಂದಿದ್ದರೆ ನನ್ನಂತೆಯೇ ಹೇಳುತ್ತಿದ್ದನಮ್ಮ.

**ವೇಶ್ಯೆ:**—(ಅಳುವಿನ ಮಧ್ಯದಲ್ಲಿ ನಗುತ್ತ) ಏನೆಂದಿರಿ? ಏನೆಂದಿರಿ? ನಿಮ್ಮಂಥವರು ವಿಟರಾಗುವ ಸಂಭವವೂ ಉಂಟೇ?

**ರಾಮ:**— ಏಕೆ ಕೂಡದು?

**ಅರ್ಚಕ:**—(ಜನಾಂತಿಕವಾಗಿ) ಇದೇನು ಮತ್ತೆ? ಏನೋ ಅರ್ಥವಿರಬೇಕು.

**ವೇಶ್ಯೆ:**— ತಮ್ಮಂತಹವರು ವಿಟರಾಗುವ ಭಾಗ್ಯ ನನಗುಂಟೇ?

**ರಾಮ:**— ಉಂಟು.... 'ರಮತೇ ಬಾಲೋನ್ಮತ್ತವದೇವ'. .. ಆದರೆ....

**ಅರ್ಚಕ:**—(ಜನಾಂತಿಕವಾಗಿ) ಉರುಳಿದ! ಇವನನ್ನು ಗೌರವಿಸಿ ಪಾಪಿಯಾದೆ.

**ವೇಶ್ಯೆ:**—ಧನ್ಯಳಾದೆ.

**ರಾಮ:**—ಪೂರ್ತಿಯಾಗಿ ಕೇಳದೆ ದುಡುಕಬೇಡ. ಕೊಂಚ ಕೇಳು.

**ಅರ್ಚಕ:**—(ಜನಾಂತಿಕವಾಗಿ) ಕೊಂಚ ಕೇಳು. ಕೊಂಚ ಕೇಳು. ಹೇಳುತ್ತಾನೆ.

**ವೇಶ್ಯೆ**:— ಏನು ಬೇಕಾದರೂ ಹೇಳು ಪ್ರಿಯಾ.

**ರಾಮ**:—ನಾನು ವಿಟನಾಗಲು ಅಡ್ಡಿಯಿಲ್ಲ. ಆದರೆ ನನಗೂ ಒಬ್ಬಳು ಹೆಂಡತಿ ಇದ್ದಾಳೆ. ಅವಳಲ್ಲಿ ಪ್ರೀತಿ. ಅವಳಿಗೆ ದ್ರೋಹ ಮಾಡಲಾರೆ. ಇದರ ಮೇಲೆ ಎಲ್ಲ ಸ್ತ್ರೀಯರೂ ಸರ್ವತೋಮುಖಿಯಾದ ಆ ಲೋಕಮಾತೆಯ ಮುಖಗಳೆಂದು ಮಾತೃಭಾವನೆಯಿಂದಿರಲು ನನಗೆ ಆಶೆಯಮ್ಮ. ಹಾಗೆ ಮಾಡಿ ಮೇಲಕ್ಕೇರಲೇ? ಅಥವಾ ನೀನು ಕೋರಿದಂತೆ ವಿಟನಾಗಿ ಕೆಳಕ್ಕೆ ಉರುಳಲೆ? ಹೇಳು, ಹೇಳು. ನೀನು ಹೇಗೆ ಕೋರಿದರೆ ಹಾಗೆ ಮಾಡುವೆನು. (ವೇಶ್ಯೆಯು ನಾಚಿ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಆಲೋಚನಾಮಗ್ನಳಾಗಿ ನಿಲ್ಲುವಳು) ವಿದ್ಯಾರಣ್ಯ ಮುನಿಗಳಂತೆ ಆ ತಾಯಿಯನ್ನಾರಾಧಿಸಲೆ? ಅಥವಾ ವಿಟ ಸಾರ್ವಭೌಮನಾಗಿ ನಿನ್ನನ್ನಾರಾಧಿಸಿ ಕೋಟಲೆಪಡಲೆ?

**ಅರ್ಚಕ**:—(ಪ್ರವೇಶಿಸಿ, ತನ್ನ ಕೈಲಿದ್ದ ವಸ್ತುಗಳನ್ನು ಗರ್ಭಗುಡಿಯಲ್ಲಿಟ್ಟು, ರಾಮಲಿಂಗನ ಕಾಲುಗಳಿಗೆರಗಿ ರೋದಿಸಿ) ಮಹಾತ್ಮರೆ! ಮನ್ನಿಸಿ. ನಾನೊಬ್ಬ ಪಾಪಿ, ಮರೆಯಲ್ಲಿ ನಿಂತು ನೋಡುತ್ತಿದ್ದೆ. ಆಗಾಗ ತಮ್ಮನ್ನು ನಿಂದಿಸಿದೆ.

**ರಾಮ**:—(ಅರ್ಚಕನನ್ನು ಮೇಲಕ್ಕೆಬ್ಬಿಸಿ) ಒಬ್ಬರು ಆಳುವನ್ನು ನಿಲ್ಲಿಸು ವಂತೆ ಮಾಡುವ ವೇಳೆಗೆ ಇನ್ನೊಬ್ಬರ ಅಳು. ನನಗೇ ಹುಚ್ಚೊ? ನಿಮಗೇ ಹುಚ್ಚೊ? ಅಥವಾ ನಮ್ಮೆಲ್ಲರಿಗೂ ಹುಚ್ಚೊ?

**ಅರ್ಚಕ**:—ನಮಗೇ ಹುಚ್ಚು. ತಮಗಲ್ಲ. ಕಮಲದ ಬಳಿಯಲ್ಲಿದ್ದೂ ಅದರ ಪರಿಮಳವನ್ನೂ ಸೌಂದರ್ಯವನ್ನೂ ಗ್ರಹಿಸದ ಕಪ್ಪೆಗಳು ನಾವು.

**ರಾಮ**:—ಕಪ್ಪೆಗಳೂ ಅಲ್ಲ, ಆನೆಗಳೂ ಅಲ್ಲ, ಮೊಸಳೆಗಳೂ ಅಲ್ಲ; ಮನುಷ್ಯರು. ಐದು ಅಡಿಗಳಿಗಿಂತ ಎತ್ತರವಾಗಿದ್ದೀರಿ! (ನಕ್ಕು) ಅಬ್ಬ! ಕಪ್ಪೆಗಳು ಇಷ್ಟು ಎತ್ತರವಾದರೆ ಮುಂದೆ ಗತಿಯೇನು?

**ವೇಶ್ಯೆ**:—ಪೂಜ್ಯರೆ, ನೀವು ಗುರುಗಳು.

**ರಾಮ**:—ಗುರುವೂ ಇಲ್ಲ, ಲಘುವೂ ಇಲ್ಲ. ಗುರು ಲಘು ಆದೆಲ್ಲಾ ಛಂದಸ್ಸಿನಲ್ಲಿ.

**ವೇಶ್ಯೆ**:—ಪೂಜ್ಯರೆ, ಮಹಾಪ್ರಧಾನರಾದ ಅಪ್ಪಾಜಿಯವರ ಕಡೆಯ ವರ ಮಾತುಗಳನ್ನು ಕೇಳಿ ನಿಮ್ಮ ಮನಸ್ಸು ಪರೀಕ್ಷೆ ಮಾಡಲು ಬಂದು, ನನಗೆ ಬಹಳ ಉಪಕಾರವಾಯಿತು.

**ರಾಮು:**– (ನಕ್ಕು) ಓಹೋಹೋ! ಹಾಗೋ? ಇತರರ ಮನಸ್ಸನ್ನು ಪರೀಕ್ಷೆ ಮಾಡಬಯಸುವವರೆಲ್ಲಾ ಮೊದಲು ತಮ್ಮತಮ್ಮ ಮನಸ್ಸನ್ನು ಪರೀಕ್ಷೆ ಮಾಡಿಕೊಂಡರೆ ಮೇಲು.

**ವೇಶ್ಯೆ:**—ಪೂಜ್ಯರೆ, ತಾವು ನನ್ನ ಸ್ವತ್ತುಗಳನ್ನೆಲ್ಲಾ ಸ್ವೀಕರಿಸಿ, ನನಗೆ ದೇವಿಯ ಭಕ್ತಿಯನ್ನು ಉಪದೇಶಿಸಿ ಉದ್ಧಾರ ಮಾಡಬೇಕು.

**ರಾಮು:**—ಸ್ವತ್ತುಗಳನ್ನು ಸ್ವೀಕರಿಸಿ ಭಕ್ತಿಯ ಉಪದೇಶವೆ? ಈ ವ್ಯಾಪಾರಧರ್ಮ ಬೇಡಮ್ಮ. ನನ್ನ ಸ್ವತ್ತುಗಳನ್ನೇ ಬಿಟ್ಟು ಬಂದಿರುವ ನನಗೆ ನಿನ್ನ ಸ್ವತ್ತುಗಳೇಕೆ ತಾಯಿ? ನೀನು ನಿಜವಾಗಿಯೂ ಸ್ವತ್ತುಗಳನ್ನು ಕೊಡುವುದಾದರೆ, ಧರ್ಮಕಾರ್ಯಕ್ಕಾಗಿ ವಹಿಸು. ಸ್ತನ್ಯವನ್ನು ಬಿಡಿಸುವಾಗ ಮಗುವಿನ ಹೃದಯದಲ್ಲಿ ಹುಟ್ಟುವ ಕಾತರ ಕಳವಳಗಳು ಭಕ್ತಿರಸಕ್ಕಾಗಿ ನಿನ್ನ ಹೃದಯದಲ್ಲಿ ಮೂಡಿದಾಗ, ದೇವಿಯ ಉಪಾಸನೆಯ ಮಾತು. ಅದುವರೆಗಿನ ಭಕ್ತಿಪ್ರದರ್ಶನವೆಲ್ಲಾ ಕಂಚುಗಾರರ ಅಂಗಡಿಯ ತೋರಿಕೆಯಮ್ಮ.

(ವೇಶ್ಯೆಯು ರಾಮಲಿಂಗನಿಗೆ ನಮಸ್ಕರಿಸಿ ಹೋಗುವಳು)

**ಮಹಾಪ್ರಧಾನರು:**—(ಅಪ್ಪಾಜಿ ಪ್ರವೇಶಿಸಿ, ದೇವಿಯ ವಿಗ್ರಹಕ್ಕೆ ನಮಸ್ಕರಿಸಿ, ಆಬಳಿಕ ರಾಮಲಿಂಗನ ಕಡೆಗೆ ತಿರುಗಿ) ತಮ್ಮಂತಹ ಮಹಾತ್ಮರು ದೊರೆತಾರೇ ಎಂದು ನಿರೀಕ್ಷಿಸಿಕೊಂಡಿದ್ದೆ. ತಮ್ಮ ದರ್ಶನದಿಂದ ಧನ್ಯನಾದೆ. ನಾನು ಈ ಮಾರ್ಗವಾಗಿಯೇ ಬರುತ್ತಿದ್ದೆ. ಇಲ್ಲಿ ನಡೆದುದನ್ನೆಲ್ಲವನ್ನೂ ನೋಡಿದ್ದೇನೆ.

**ರಾಮು:**—ಎಲ್ಲರೂ ಒಂದಾಗಿ, ನನಗೆ ಸಲ್ಲದ ಅರ್ಹತೆಯನ್ನು ನನ್ನಲ್ಲಿ ಆರೋಪಿಸಿ, ನನ್ನನ್ನು ಮುಳುಗಿಸುವಂತಿದೆ. ಅಪ್ಪಾಜಿ, ಜ್ಞಾನವೃದ್ಧರೂ ವಯೋವೃದ್ಧರೂ ಆದ ತಾವು ಪ್ರಜೆಗಳಿಗೆ ತಂದೆಯಂತಿರುವಿರಿ. ತಾವು ನನ್ನನ್ನು 'ರಾಮಲಿಂಗ' ಎಂದು ಕರೆದರೆ ನಾನು ಕೃತಾರ್ಥನಾದೆ. ಹಾಗೆ ಸಂಬೋಧಿಸಿ ಉಪಕರಿಸಬೇಕು.

**ಅಪ್ಪಾಜಿ:**—(ಸಂತೋಷಭರಿತನಾಗಿ) ಆಗಬಹುದು. ಅರ್ಚಕರೆ, ಮಂಗಳಾರತಿಯು ನಡೆಯಬಹುದು.

[ಅರ್ಚಕನು ಮಂಗಳಾರತಿ ಮಾಡುತ್ತಿರುವಲ್ಲಿ ತೆರೆ ಬೀಳುವುದು]

—

## ದೃಶ್ಯ ೪

(ಕಾಳಿಯ ದೇವಾಲಯಕ್ಕೆ ಸಮೀಪದ ಬಯಲಿನ ದಾರಿ. ರಾಮಲಿಂಗನೂ ಅಪ್ಪಾಜಿಯೂ ಮಾತನಾಡುತ್ತ ಪ್ರವೇಶಿಸುವರು)

**ಅಪ್ಪಾಜಿ:**—ನಿನ್ನ ವಿಷಯವನ್ನೆಲ್ಲಾ ವಿಚಾರಿಸಿ ತಿಳಿದುಕೊಂಡಿದ್ದೇನೆ. ರಾಮಲಿಂಗಯ್ಯ, ನಿನ್ನ ಸೌಜನ್ಯವನ್ನು ನೋಡಿದರೆ ನಾವಿಬ್ಬರೂ ಚಿರಪರಿಚಿತರಂತೆ ತೋರುತ್ತಿದೆ.

**ರಾಮ:**— ನಿಜ. ನಿಜ. ನಮ್ಮಿಬ್ಬರಿಗೂ ಅನೇಕ ಜನ್ಮಗಳು ಕಳೆದು ಹೋಗಿವೆ. ಚಿರಪರಿಚಿತರೇ ಆಗಿರಬೇಕು.

**ಅಪ್ಪಾಜಿ:**—ರಹಸ್ಯವಾಗಿ ಮಾತನಾಡುವ ಉದ್ದೇಶದಿಂದ ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬಂದೆ.

**ರಾಮ:**—ಅಪ್ಪಾಜಿ, ತಾವು ಪ್ರಜೆಗಳ ತಂದೆ. ನಾವೆಲ್ಲ ತಮ್ಮ ಮಕ್ಕಳಂತೆ. ತಮ್ಮ ಆಜ್ಞೆಯಂತೆ ಶಿರಸಾವಹಿಸಿ ನಡೆಯುವುದು ನಮ್ಮ ಕೆಲಸ.

**ಅಪ್ಪಾಜಿ:**—ಕರ್ಣಾಟಕ ಸಾಮ್ರಾಜ್ಯಕ್ಕೆ ನಿನ್ನಿಂದ ದೊಡ್ಡ ಉಪಕಾರವಾಗಬೇಕು.

**ರಾಮ:**—ನಾನೊಬ್ಬ ಶುಂಠ. ನನ್ನಿಂದ ಏನಾದೀತು ಅಪ್ಪಾಜಿ ?

**ಅಪ್ಪಾಜಿ:**—ರಾಜ್ಯಲಕ್ಷ್ಮಿ ವಿಮುಖಳಾಗಿದ್ದಾಳೆ. ಆಕೆಯು ಮತ್ತೆ ಪ್ರಸನ್ನಳಾಗಬೇಕಾದರೆ ಮಹಾಯಜ್ಞವೊಂದು ನಡೆಯಬೇಕು. ಅದಕ್ಕೊಂದು ಪಶು ಬೇಕಾಗಿದೆ. ಅದಕ್ಕಾಗಿ ಹುಡುಕುತ್ತಿದ್ದೇನೆ.

**ರಾಮ:**—ಸರಿ! ಯಾವುದಕ್ಕೋ ಗ್ರಹಚಾರ ವಕ್ರವಾಗಿದೆ. ಅದಕ್ಕೇನಂತೆ, ಒಂದು ಕುರಿಯನ್ನೋ ಕೋಣವನ್ನೋ ಹುಡುಕಿದರಾಯಿತು.

**ಅಪ್ಪಾಜಿ:**—(ನಕ್ಕು) ಕುರಿಯೋ ಕೋಣನೋ ಬೇಕಾಗಿಲ್ಲ. ಒಂದು ಮನುಷ್ಯ-ಪಶು ಬೇಕಾಗಿದೆ.

**ರಾಮ:**—(ಮೆಲ್ಲಗೆ) ಪ್ರಜೆಗಳಿಗೆ ತಂದೆಯಂತಿರುವ ನಿಮಗೂ ಈ ಅವಸ್ಥೆ ಬಂದಿದೆಯೇ ?

**ಅಪ್ಪಾಜಿ:**—ಅದೇನಯ್ಯಾ ಗೊಣಗಾಟ ? ಮಾತುಗಳು ಕೇಳಿಸಲೇ ಇಲ್ಲ.

**ರಾಮು:**—ಪ್ರಜೆಗಳಿಗೆ ತಂದೆಯಂತಿರುವ ನಿಮಗೂ ಈ ಅವಸ್ಥೆ ಬಂದಿದೆಯೇ—ಎಂದುಕೊಂಡೆ.

ಅಪ್ಪಾಜಿ:—ಆ ಮಾತು ಹಾಗಿರಲಯ್ಯಾ, ನನಗೆ ಉತ್ತಮ ಜಾತಿಯ ಮನುಷ್ಯ-ಪಶು ಬೇಕಾಗಿದೆ.

ರಾಮು:—ಮನುಷ್ಯ-ಪಶುವಿನಲ್ಲಿ ಜಾತಿ ಬೇರೆಯೆ !

ಅಪ್ಪಾಜಿ:—ಹೌದು, ಜಾತಿಯೂ ಉಂಟು. ಸೊಗಸಾದ ಮನುಷ್ಯ ಪಶು ಸಿಕ್ಕಿದೆ. ಇದೇ ದಿನ ಸಿಕ್ಕಿತು.

ರಾಮು:—ಮನುಷ್ಯ-ಪಶು ! ಆ ಪುಣ್ಯಪುರುಷನಾರು ?

ಅಪ್ಪಾಜಿ:—ಆತನೇ . . . . ಆತ ನನ್ನೆದುರಿಗೇ ಇದ್ದಾನೆ.

ರಾಮು:—ನಾನೆ ? ನಾನು ! ನಾನು ಆ ಮನುಷ್ಯ-ಪಶುವೇ ?

ಅಪ್ಪಾಜಿ:—ಹೌದು, ನೀನೇ. ನೀನೇ ! ಏಕೆ ? ಭಯವೇ ?

**ರಾಮು:**—(ನಕ್ಕು) ಭಯವೇಕೆ ಅಪ್ಪಾಜಿ ? ಇದೇ ಮೊದಲನೆಯ ಜನ್ಮವೆ? ಇದೇ ಮೊದಲನೆಯ ಸಾವೆ ? ಎರಡೂ ಅಲ್ಲವಲ್ಲಾ ! ಪ್ರಥಮ ಪರಿಚಯ ಪ್ರಾಣನಾಶ ! ಆಗಬಹುದು. ದುರ್ಮರಣವಲ್ಲಾ ಎಂದು ಮನಸ್ಸು ಅಳುಕಿತು. ಆ ತಾಯಿಯ ಇಷ್ಟದಲ್ಲಿದ್ದರೆ ಅದೂ ನಡೆದುಹೋಗಲಿ.

ಅಪ್ಪಾಜಿ:—ಮರಣ. . . . ಮರಣ. . . . ಮರಣದ ಸುದ್ದಿಯೇಕೆ ?

**ರಾಮು:**—(ವ್ಯಂಗ್ಯವಾಗಿ ನಕ್ಕು) ಓಹೊಹೊ ! ಹಾಗೋ ! ಕೊಂದಮೇಲೆ ಬದುಕಿಸುವ ಯೋಚನೆಯೂ ಇದೆ. ಹಿಂದೆ ಅದೇನೋ ಅಮೃತ ಸಂಜೀವಿನೀ ವಿದ್ಯೆ ಇದ್ದಿತಂತೆ. ತಮಗೆ ಯಾವ ಶುಕ್ರಾಚಾರ್ಯರು ಸಿಕ್ಕಿದ್ದಾರೋ ಯಾರು ಬಲ್ಲರು ?

ಅಪ್ಪಾಜಿ:—ಸಾಮ್ರಾಜ್ಯರಕ್ಷಣೆಯೊಂದು ಮಹಾಯಜ್ಞವಲ್ಲವೆ, ರಾಮಲಿಂಗಯ್ಯ ? ತನುಮನಗಳೆರಡನ್ನೂ ಸಾಮ್ರಾಜ್ಯಸೇವೆಗೆ ಸಂಪೂರ್ಣವಾಗಿ ಸಮರ್ಪಿಸಿ ಸಹಾಯ ಮಾಡಬೇಕಾಗಿ ಬಂದರೆ, ಯಜ್ಞಪಶುವಾದಂತೆ ಅಲ್ಲವೇನು ? ನಿನ್ನಂತಹ ಯಜ್ಞಪಶುವು ದೊರೆಯುವುದು ಸಾಮಾನ್ಯವೇ ?

**ರಾಮು:**—ಓಹೋ ! ಹಾಗೇನು ? ನನ್ನದು ಒನಕೆಯ ಮೊನೆಯಂತೆ ಬಹು ಸೂಕ್ಷ್ಮವಾದ ಬುದ್ಧಿ. ಅರ್ಥವಾಗಲಿಲ್ಲ. ಅಪ್ಪಾಜಿ, ದೇವಿಯ

ದರ್ಶನಕ್ಕಾಗಿ ಕಾದಿರುವವನು ನಾನು. ನನಗೆ ರಾಜಕೀಯ ವಿಚಾರಗಳೇ ತಿಳಿಯವು. ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ, ಅಪ್ಪಾಜಿ!

ಅಪ್ಪಾಜಿ:—ಸಾಮ್ರಾಜ್ಯದ ಸೇವೆಗೆ ಪ್ರಜೆಗಳನ್ನು ಎಳೆದು ಬಲಾತ್ಕರಿಸಲು ಮಹಾಪ್ರಧಾನರಿಗೆ ಸರ್ವಾಧಿಕಾರವುಂಟು. ನಿನ್ನ ಹಾಗೆ ಇರುವ ಮತ್ತೊಬ್ಬರನ್ನು ನಾನು ಕಂಡಿಲ್ಲ.

**ರಾಮ:**—ನನ್ನ ಹಾಗಿರುವವನು ನಾನೊಬ್ಬನೇ! ನನ್ನ ಹಾಗಿರುವವನು ಮತ್ತೊಬ್ಬನೆಲ್ಲಿ ಸಿಕ್ಕಿಯಾನು? ಅವನನ್ನು ನೀವೆಲ್ಲಿ ತಾನೆ ಕಂಡೀರಿ?

ಅಪ್ಪಾಜಿ:—ಅದೂ ನಿಜವೇ. ಕಾಮಿನೀ ಕಾಂಚನಗಳ ಮೇಲಿನ ವ್ಯಾಮೋಹವನ್ನು ತೊರೆದಿರುವವನು ನೀನು. ವಿಧಾತನು ಒಡ್ಡಿರುವ ಹೆಣ್ಣು ಹೊನ್ನುಗಳ ಬಲೆಗೆ ಬೀಳದವನು ಸಾಕ್ಷಾತ್ ಪರಮೇಶ್ವರ ಸ್ವರೂಪನೆಂದು ನನ್ನ ಭಾವನೆ.

**ರಾಮ:**—ನನ್ನಂಥ ಶುಂಠನ ಸೇವೆಯನ್ನು ಕೋರುವಷ್ಟು ಬಡತನ ಬಂದಿದೆಯೇ, ಕರ್ಣಾಟಕ ಸಾಮ್ರಾಜ್ಯಕ್ಕೆ?

ಅಪ್ಪಾಜಿ:—ಸಿಂಹಾಸನವನ್ನೇರಿದವರು ರಾಜರ್ಷಿಗಳಾದರೆ ಅದು ಪ್ರಜೆಗಳ ಪರಮ ಸೌಭಾಗ್ಯ. ಆದರೆ ಎಲ್ಲ ರಾಜರಿಂದಲೂ ಅದು ಸಾಧ್ಯವಿಲ್ಲ. ಪ್ರಭುಗಳು ರಾಜರ್ಷಿಗಳಾಗಿಲ್ಲದ ಸಂದರ್ಭದಲ್ಲಿ ನಿಃಸ್ಪೃಹನಾದ ಜ್ಞಾನಿಯೊಬ್ಬನು ಕಾರ್ಯರಂಗದಲ್ಲಿಲ್ಲದೆ ಹೋಗುವುದರಿಂದಲೇ ಚಕ್ರಾಧಿಪತ್ಯಗಳು ಮುಳುಗಿ ಮಣ್ಣುಗೂಡಿ ಹೋಗುವುವು. ಈಗಿನ ಚಕ್ರವರ್ತಿಗಳಾದ ವೀರ ನರಸಿಂಹರಾಯರು ಬಹು ಕ್ರೂರಿಗಳಾಗಿದ್ದಾರೆ. ಆಶೆಯನ್ನು ತೊರೆದ ಧರ್ಮ ಸಚಿವನೊಬ್ಬನಿದ್ದು, ಆ ಪ್ರಭುವು ಆತನ ಮಾತನ್ನು ಕೇಳಿದರೆ ಚಕ್ರಾಧಿಪತ್ಯಕ್ಕೆ ಚಿರಜೀವಿಪಟ್ಟ. ಧರ್ಮಸಚಿವನೊಬ್ಬನು ಅವಶ್ಯವಾಗಿ ಬೇಕು. ಕರ್ಣಾಟಕ ಸಾಮ್ರಾಜ್ಯಕ್ಕೆ ಮತ್ತೆ ಜೀವಕಳೆಯನ್ನು ತುಂಬಬೇಕಾದ ಸನ್ನಿವೇಶವು ಒದಗಿದೆ.

**ರಾಮ:**—ಅಗತ್ಯವಾಗಿ ಆಗಬಹುದು. ಜೀವಕಳೆಯನ್ನು ತುಂಬಬಲ್ಲವರಾದ ಅಪ್ಪಾಜಿಗಳು ಧರ್ಮಸಚಿವರಾಗಿರುವಾಗ ಕೊರತೆಯೇನು? ತಾವು ಧರ್ಮವೇ ಧರೆಗಿಳಿದು ಬಂದ ಹಾಗಿದ್ದೀರಿ. ವಿಜಯನಗರವು ದೇವಿಯ ರಂಗ ಮಂಟಪದ ಹಾಗೆ ಇರುವಂತೆ ಈಗ ಜೀವಕಳೆಯನ್ನು ತುಂಬಿ.

**ಅಪ್ಪಾಜಿ:**—ಒಬ್ಬನಿಂದ ಎಲ್ಲವೂ ಸಾಧ್ಯವಿಲ್ಲ. ನನ್ನ ಜತೆಗೆ ನೀನೂ ಧರ್ಮಸಚಿವನಾಗಿದ್ದು ಧರ್ಮಪ್ರಭೆಯನ್ನು ಹರಡು. ಚಕ್ರವರ್ತಿಗಳಾದ ವೀರನರಸಿಂಹರಾಯರಿಗೆ ಈಗ ಪ್ರಬಲವಾದ ವ್ಯಾಧಿ. ಅವರಿಗೆ ಸಂಭವಿಸಿರುವ ರಾಜಯಕ್ಷ್ಮ ರೋಗವು ಗುಣವಾಗುವಂತಿಲ್ಲವೆಂದು ವೈದ್ಯರು ರಹಸ್ಯವಾಗಿ ನನ್ನೊಡನೆ ಹೇಳಿದ್ದಾರೆ. ಅವರು ಮೊದಲೇ ಕ್ರೂರಿಗಳಾಗಿ ರಾಜ್ಯಕ್ಕೆ ಅಧಿಕಾರಿಯಾಗಿದ್ದ ಸಾಳ್ವ ನರಸಿಂಹರಾಯರ ಕುಮಾರನನ್ನು ಕೊಲೆಮಾಡಿಸಿ ಸಿಂಹಾಸನವನ್ನೇರಿದರು. ಕ್ರೂರ ಸ್ವಭಾವವುಳ್ಳ ಅವರ ರೋಷವು ರೋಗದ ದೆಸೆಯಿಂದ ಈಗ ಮತ್ತೂ ಹೆಚ್ಚಾಗಿದೆ. ಅವರಿಗೆ ಧರ್ಮೋಪದೇಶ ಮಾಡುವುದೊಂದು—ಅವರ ವ್ಯಾಧಿಯು ಗುಣವಾಗುವಂತಿಲ್ಲವಾದ ಕಾರಣ, ಕರ್ಣಾಟಕ ಸಾಮ್ರಾಜ್ಯದ ದೇವಮಂದಿರವನ್ನು ಬೆಳಗಬಲ್ಲ ಬೇರೆ ಮೂರ್ತಿಯನ್ನು ಕಡೆದು ಸಿದ್ಧಪಡಿಸಿಕೊಳ್ಳುವುದೊಂದು—ಇವೆರಡಕ್ಕೂ ನಿನ್ನ ಸಹಾಯವು ಬೇಕು. ಚಕ್ರಾಧಿಪತ್ಯವು ನಮ್ಮೆಲ್ಲರಿಗಿಂತಲೂ ದೊಡ್ಡದು. ವಿದ್ಯಾರಣ್ಯರ ತಪಸ್ಸಿನ ಫಲವಾಗಿ ಅವರ ವರದ ಹಸ್ತದಿಂದ ವೃದ್ಧಿಯಾದುದು.

**ರಾಮು:**—ನೀವು ಸೂಚಿಸಿದ ಆ ಮೂರ್ತಿ ಈಗಿನ ಚಕ್ರವರ್ತಿಗಳ ಚಿಕ್ಕತಾಯಿ ನಾಗಾಂಬಿಕೆಯವರ ಮಗ ಕೃಷ್ಣದೇವರಾಯರು ತಾನೆ? ಅವರೇನೋ ವಿಷಯಲಂಪಟರಂತೆ. ಚಿನ್ನಾಸಾನಿಯೆಂಬ ವೇಶ್ಯೆಯು ಅವರ ಮನ ಮೋಹಿನಿಯಂತೆ!

**ಅಪ್ಪಾಜಿ:**—ಕಳಂಕವಿಲ್ಲದ ಚಂದ್ರಮಂಡಲವನ್ನಾರು ನೋಡಿದ್ದಾರೆ, ರಾಮಲಿಂಗಯ್ಯ? ಒಬ್ಬರಲ್ಲಿ ಒಂದು ದೋಷವಿದ್ದರೆ, ಮತ್ತೊಬ್ಬರಲ್ಲಿ ಮತ್ತೊಂದು ಬಗೆಯ ದೋಷವಿರುವುದು. ಅದು ಹೋಗಲಿ. ಚಿನ್ನಾದೇವಿ ಮಾತ್ರ ಇತರ ವೇಶ್ಯೆಯರಂತಲ್ಲ. ಸಂಸಾರಿಯ ಗುಣಗಳೆಲ್ಲ ಅವಳಲ್ಲಿವೆ. ತನ್ನ ಸವತಿಯಾದ ತಿರುಮಲದೇವಿಯನ್ನು ಅಕ್ಕನಂತೆ ಭಾವಿಸುತ್ತಾಳೆ.

**ರಾಮು:**—ಆಕೆಗೆ ಕೈ ಮುಗಿಯಲು ಅದೊಂದು ಗುಣವೇ ಸಾಕು.

**ಅಪ್ಪಾಜಿ:**—ವೇಶ್ಯೆಗೆ ಕೈ ಮುಗಿಯಲೂ ಸಿದ್ಧನೇ ನೀನು, ರಾಮಲಿಂಗಯ್ಯ!

**ರಾಮು:**—ವೇಶ್ಯಾಕುಲದಲ್ಲಿ ಹುಟ್ಟಿಯೂ, ವೇಶ್ಯಾಸ್ವಭಾವವಿಲ್ಲದೆ

ಸಂಸಾರಿಯು ಗುಣವುಳ್ಳವಳಿಗೆ ಅಗತ್ಯವಾಗಿ ಕೈಮುಗಿಯಬಹುದು. ಸ್ತ್ರೀ-ಮಾತ್ರದವರಲ್ಲಿ ದೇವಿಯ ಪ್ರತಿಬಿಂಬವನ್ನು ಕಾಣಲು ನನಗೆ ಆಶೆ.

**ಅಪ್ಪಾಜಿ:**—ಅದಕ್ಕಾಗಿಯೇ ನೀನೂ ಧರ್ಮಸಚಿವನಾಗಬೇಕೆಂದು ನನಗೂ ಆಶೆ. ಆ ಮಾತು ಹಾಗಿರಲಿ. ಚಿನ್ನಾದೇವಿಯು ಗುಣವತಿಯಾಗಿರುವುದರ ಜತೆಗೆ ರೂಪವತಿಯೂ ಹೌದು. ಅಪ್ಸರಕನ್ಯೆಯಂತಿದ್ದಾಳೆ. ಕೃಷ್ಣದೇವರಾಯರ ಕಾಮಪ್ರವೃತ್ತಿ ಹುಚ್ಚುಹೊಳೆಯಾಗದಂತೆ ತಡೆದು ಸಾಮ್ರಾಜ್ಯದ ಅಭಿಮಾನವನ್ನು ಬೆಳಗಿಸಲು ಸಹಾಯವಾಗುವಂತೆ ಅವಳೂ ನೆರವಾಗುವಳು. ಸಾಮ್ರಾಜ್ಯಸೇವೆಗೆ ಅವಳನ್ನೂ ಒಪ್ಪಿಸುತ್ತೇನೆ. ನನಗಿರುವುದು ಒಂದೇ ಆಶೆ. ಅದು ತೀರಿದರೆ ನಾನು ನಿತ್ಯತೃಪ್ತ.

**ರಾಮ:**—ಏನದು ಆಶೆ ತಮ್ಮದು, ಅಪ್ಪಾಜಿ?

**ಅಪ್ಪಾಜಿ:**—ಕರ್ಣಾಟಕ ಸಾಮ್ರಾಜ್ಯದ ಅಖಂಡ ಕೀರ್ತಿಧ್ವಜವು ಮತ್ತೊಮ್ಮೆ ಹಾರಬೇಕು. ವಿದ್ಯಾರಣ್ಯ ವಿರೂಪಾಕ್ಷರಿಗೆ ಅಖಂಡ ಸೇವೆ ಸಲ್ಲಿಸಬೇಕು. ಆಸಮುದ್ರಾಂತವಾಗಿ ಅಖಂಡವಾಗಿ ಸಾಮ್ರಾಜ್ಯದ ಸೀಮಾರೇಖೆಗಳನ್ನು ಒತ್ತರಿಸಬೇಕು. ಪ್ರಜೆಗಳೆಲ್ಲರೂ ರಾಜಭಕ್ತಿಯಿಂದ ಕೂಡಿ ಸಂತತವೂ ಕರ್ಣಾಟಕ ಸಾಮ್ರಾಜ್ಯದ ಸೇವೆ ಮಾಡಬೇಕು. ರಾಜ್ಯಲಕ್ಷ್ಮಿಯ ಸೇವೆಯ ಮಹಾಯಜ್ಞಕ್ಕೆ ಸರಿಯಾದ ಪಶುವು ದೊರೆತಿರುವುದೇ ಇದಿಷ್ಟು ಸುಮುಖವಾಗಿ ನೆರವೇರುವುದಕ್ಕೆ ಶುಭ ಶಕುನ. ಬಾ! ಬಾ! ರಾಮಲಿಂಗಯ್ಯ! ನನ್ನೊಡನೆ ಬಾ. (ರಾಮಲಿಂಗಯ್ಯನ ಭುಜದ ಮೇಲೆ ಕೈಹಾಕಿಕೊಂಡು ಕರೆದುಕೊಂಡು ಹೋಗುವನು.)

(ತೆರೆ ಬೀಳುವುದು)

—

# ಎರಡನೆಯ ಅಂಕ



## ದೃಶ್ಯ ೧

[ಉದ್ಯಾನದ ಮುಂಭಾಗದಲ್ಲೊಂದು ಕೃತಕವಾದ ಕ್ರೀಡಾಶೈಲ. ಅದರ ಬಳಿಯಲ್ಲಿ ಒಂದು ಅಮೃತಶಿಲಾಪೀಠ ಚಿನ್ನಾದೇವಿ ಅದರ ಮೇಲೆ ಕುಳಿತು ವೀಣೆಯನ್ನು ನುಡಿಸುತ್ತಾ ಹಾಡುತ್ತಿರುವಳು.]

**ಚಿನ್ನಾದೇವಿ:—ಚಂದನ ಚರ್ಚಿತ ನೀಲಕಳೇಬರ ಪೀತವಸನ ವನಮಾಲೀ ।**
**ಕೇಳಿಚಲನ್ಮಣಿಕುಂಡಲಮಂಡಿತ ಗಂಡಯುಗಸ್ಮಿತಶಾಲೀ ॥**

ಈಗ ನನ್ನ ಪ್ರಿಯನು ಇಲ್ಲಿಗೆ ಬಂದಿದ್ದರೆ. . (ಆ ವೇಳೆಗೆ ಸರಿಯಾಗಿ ಪ್ರವೇಶಿಸಿದ ಕೃಷ್ಣದೇವರಾಯನನ್ನು ಸಂಭ್ರಮದಿಂದ ಇದಿರುಗೊಂಡು ಮುಂದೆ ಹೇಳುವ ಗೀತವನ್ನು ಹಾಡುತ್ತ ಅಮೃತ ಶಿಲಾಪೀಠದ ಮೇಲೆ ಕುಳ್ಳಿರಿಸಿ ಉತ್ಸಾಹದಿಂದ ಮೈಮರೆಯುವಳು)

**ಪೀನಪಯೋಧರ ಭಾರ ಭರೇಣ ಹರಿಮ್ ಪರಿರಭ್ಯ ಸರಾಗಮ್ ।**
**ಗೋಪವಧೂರನುಗಾಯತಿ ಕಾಚಿದುದಂಚಿತ ಪಂಚಮರಾಗಮ್ ॥**

ಕೇಳು, ಕೇಳು, ಪ್ರಿಯನೆ! ವಿಲಾಸವತಿಯಾದ ಮುಗ್ಧವಧುವೊಬ್ಬಳು ಸಾಕೂತಭಾವದಿಂದ ಮಧುಸೂದನನ ಮುಖಸರೋಜವನ್ನು ಧ್ಯಾನಿಸಿದಳಂತೆ. ಆ ಪ್ರೇಮಲೀಲೆ—ಕೇಳು ಪ್ರಿಯನೆ!

**ಕಾಪಿವಿಲಾಸವಿಲೋಲ ವಿಲೋಚನಖೇಲ ಜನಿತ ಮನೋಜಮ್ ।**
**ಧ್ಯಾಯತಿ ಮುಗ್ಧವಧೂರಧಿಕಂ ಮಧುಸೂದನವದನಸರೋಜಮ್ ॥**

**ಕೃಷ್ಣ**:—ಮತ್ತಾರಾದರೂ ಇಂದು ನಿನ್ನನ್ನು ನೋಡಿದ್ದರೆ 'ನಿನಗೆ ಹುಚ್ಚು ಹಿಡಿದಿದೆ' ಎಂದು ಹೇಳುತ್ತಿದ್ದರು. ಚಿನ್ನಾ, ಇದೇನು ಹುಚ್ಚು ನಿನ್ನದು?

**ಚಿನ್ನಾ**:—ಗೀತಗೋವಿಂದದ ಹುಚ್ಚು ನನಗೊಬ್ಬಳಿಗೇ ಅಲ್ಲ. ಇದೇ ಸ್ಥಳದಲ್ಲಿ ಯಾರೋ ಒಬ್ಬರು ಗೀತಗೋವಿಂದದ ಶ್ಲೋಕಗಳನ್ನು ಕೇಳಿ

ಆನಂದಬಾಷ್ಪಗಳನ್ನು ಸುರಿಸಿದ್ದರಂತೆ. ಅವರ ಪರಿಚಯವು ತಮಗುಂಟೇನು? (ಅವನ ಪಾರ್ಶ್ವದಲ್ಲಿ ಕುಳಿತು, ವ್ಯಂಗ್ಯಭಾವದಿಂದ ಅವನ ಮುಖವನ್ನೇ ದೃಷ್ಟಿಸಿ ನೋಡುವಳು)

**ಕೃಷ್ಣ**:—ಅವರ ಪೂರ್ಣ ಪರಿಚಯವು ನನಗಿಲ್ಲ. ಅವರೂ ಹುಚ್ಚರು. ಹುಚ್ಚರ ಎದುರಿಗಿರುವವರೂ ಹುಚ್ಚರೇ—ಅಲ್ಲವೆ?

**ಚಿನ್ನಾ**:—ನಾನೂ ಆನಂದಬಾಷ್ಪವನ್ನು ಹಲವು ಬಾರಿ ಕಾಣಿಕೆಯಾಗಿ ಒಪ್ಪಿಸಿದ್ದೇನೆ. ಕೃಷ್ಣ ಗೋಪಿಯರ ಲೀಲಾವಿಲಾಸಗಳೆಷ್ಟು ಮನೋಹರ! (ಪ್ರೇಮಪಾರವಶ್ಯದಿಂದ ಅಭಿನಯದ ಸೊಬಗನ್ನು ಬೀರಿ ಪ್ರಪಂಚವನ್ನೇ ಮರೆತಂತೆ ಉಲ್ಲಾಸಪಡುತ್ತ)

**ಶ್ಲಿಷ್ಯತಿ ಕಾಮತಿ ಚುಂಬತಿ ಕಾಮತಿ ರಮಯತಿ ಕಾಮಪಿ ರಾಮಾಮ್ ।**
**ಪಶ್ಯತಿ ಸಸ್ಮಿತ ಚಾರುಪರಾಮಪರಾಮನುಗಚ್ಛತಿ ವಾಮಾಮ್ ॥**

ಆಹ! ಪರಮಾತ್ಮನ ಮಂದಹಾಸವೆ! ಗೋಪಿಯರ ವಿಲಾಸವೆ! ಪ್ರಿಯನೆ! ಯೌವನವು ಅಸ್ಥಿರ. ಅದು ಮರೆಯಾಗುವ ಮೊದಲೇ....

**ಕೃಷ್ಣ**:—ಚಿನ್ನಾ! ನೀನು ಹುಚ್ಚಿ. ಜಯದೇವನು ವರ್ಣಿಸಿರುವ ಭಕ್ತಿಯ ಮಧುರಭಾವದ ಅಂತರವನ್ನೇ ಗ್ರಹಿಸದೆ ಹೋದೆ. ನಾವೆಲ್ಲರೂ ಗೋಪಿಯರೆ.

**ಚಿನ್ನಾ**:—(ನಕ್ಕು) ಅದಕ್ಕೇ ಏನೋ ತಮಗೆ ಇಷ್ಟು ಯೋಚನೆ? ಪ್ರಿಯನೆ, ಏನನ್ನೋ ಯೋಚಿಸುತ್ತಿರುವೆ. ಏನು ನಿನ್ನ ಯೋಚನೆ? ಹೇಳ ಕೂಡದೆ? ನನ್ನೊಡನೆ ಹೇಳಕೂಡದೆ? ಭಾವನವರಿಗೆ ಕೂಡ ದಿನದಿನಕ್ಕೆ ಆರೋಗ್ಯವಾಗುತ್ತಿದೆ. ಇನ್ನೇನು ಯೋಚನೆ, ಹೇಳಕೂಡದೆ?

**ಕೃಷ್ಣ**:—(ನಕ್ಕು) ಹೇಳದೆ ಏನು? ನಿನ್ನ ಪ್ರೀತಿಗೆ ಪ್ರತಿಯಾಗಿ ಏನನ್ನು ಕೊಡಬಲ್ಲೆನೆಂದು ಯೋಚಿಸುತ್ತಿದ್ದೆ. ಮನಸ್ಸು ಹರ್ಷಮಗ್ನವಾದರೆ ಬಾಯಿಗೆ ಮೌನವೇ ತಾನೆ?

**ಚಿನ್ನಾ**:—ನಾನು ಧನ್ಯಳಾದೆ. ನೀವು ನನ್ನನ್ನು ಪ್ರೀತಿಸುವಷ್ಟೇ ಮಟ್ಟಿಗೆ ಅಕ್ಕನವರನ್ನೂ ಪ್ರೀತಿಸಿದರೆ ನನ್ನ ಪ್ರೀತಿಗೆ ಪ್ರತಿಯಾಗಿ ತಕ್ಕ ಬೆಲೆಯನ್ನೂ ಕೊಟ್ಟಂತಾಗುವುದು.

**ಕೃಷ್ಣ**:—ಚಿನ್ನಾ! ಸವತಿಮಾತ್ಸರ್ಯವೇ ಇಲ್ಲದವಳು ನೀನು.

**ಚಿನ್ನಾ**:—ಅಕ್ಕನವರು ನನ್ನನ್ನು ತಂಗಿಯಂತೆಯೇ ಪ್ರೀತಿಸುತ್ತಾರೆ. ಆದಕ್ಕೆ ಪ್ರತಿಯಾಗಿ ನಾನು ಅವರನ್ನು ದ್ವೇಷಿಸಬೇಕೇನು, ಹಾಗಾದರೆ? ಅವರು ಹಾಲೆರೆಯುತ್ತಿದ್ದಾರೆ; ನಾನು ಹಾವಾಗಬೇಕು, ವಿಷವಾಹಿನಿಯಾಗಬೇಕು, ಅಲ್ಲವೆ?

**ಕೃಷ್ಣ**:—(ಪ್ರಯತ್ನ ಪೂರ್ವಕವಾಗಿ ನಗುವನು)

**ಚಿನ್ನಾ**:—ಈ ನಗುವು ಎಂದಿನ ನಗುವಲ್ಲ......ಏನೋ ಯೋಚನೆ. ನನ್ನೊಡನೆ ಹೇಳಕೂಡದೆ?

**ಕೃಷ್ಣ**:—ನಿನ್ನ ಸಂತೋಷಕ್ಕೆ ಭಂಗವನ್ನುಂಟುಮಾಡಬಾರದೆಂದು ಮೊದಲೇ ಹೇಳಲಿಲ್ಲವೆ?

**ಚಿನ್ನಾ**:—ನಮ್ಮಿಬ್ಬರ ಸಂತೋಷವೂ ಬೇರೆಬೇರೆಯೆ? ಅಥವಾ ಮತ್ತಾವ ಭಾಗ್ಯಶಾಲಿನಿಯಾದರೂ ನನಗೆ ಸ..ವ..ತಿ..ಯಾ..ಗಿ ಬರುವ ಯೋಗವೊ?

**ಕೃಷ್ಣ**:—ಮನಸ್ಸು ದುಃಖದಲ್ಲಿ ಮುಳುಗಿದಾಗ ಬುದ್ಧಿಯು ದೆಸೆಗೆಡುವುದು.

**ಚಿನ್ನಾ**:—ಅದು ನನ್ನಂಥ ಮಂದಬುದ್ಧಿಯವರ ಮಾತು, ಪ್ರಿಯನೆ! ಇದುವರೆಗೂ ನನ್ನೊಡನೆ ಹೇಳದೆ ಸುಮ್ಮನಿದ್ದುದು ಸರಿಯೆ? ಸುಖದುಃಖಗಳೆರಡರಲ್ಲಿಯೂ ನಾನು ಸಮಭಾಗಿನಿಯಲ್ಲವೆ? ಹಾಗಿರಬೇಕೆಂದು ನನಗೆ ಆಶೆ. ಇನ್ನು ವಿನೋದಮಾಡುವುದಿಲ್ಲ. ಏನು ನಿಮ್ಮ ಯೋಚನೆ? ನಾನು ವಿನೋದ ಮಾಡಿದುದು ಅಪರಾಧವಾಯಿತು.

**ಕೃಷ್ಣ**:—ವಿದ್ಯಾರಣ್ಯಸ್ವಾಮಿಗಳ ಕಾಲದಿಂದ ವೃದ್ಧಿ ಹೊಂದಿದ ಕರ್ಣಾಟಕ ಸಾಮ್ರಾಜ್ಯಕ್ಕೆ ಗ್ರಹಣ ಹಿಡಿಯುವಂತಿದೆ.

**ಚಿನ್ನಾ**:—ಹಾಗೆಂದರೆ? ನಮ್ಮ ವಿಜಯನಗರಕ್ಕೆ ವಿಪತ್ತೆಂದರೇನು? ಅದು ಸಾಧ್ಯವೆ?

**ಕೃಷ್ಣ**:—ಸಮ್ರಾಟರಾಗಿರುವ ಅಣ್ಣನವರು ರೋಗಗ್ರಸ್ತರಾಗಿರುವುದನ್ನು ನೆನೆದರೆ ದುಃಖವಾಗುತ್ತದೆ. ಅವರ ಕ್ರೌರ್ಯವನ್ನು ನೆನೆದರೆ ಸಂಕಟದಿಂದ ಮೈ ಉರಿಯುತ್ತದೆ. ಎಲ್ಲೆಲ್ಲಿಯೂ ದಂಗೆಗಳು. ಭಂಡಾರವು ಬರಿ

ದಾಗುತ್ತಿದೆ. ಸಹೋದರರಾದ ನಮ್ಮಿಬ್ಬರನ್ನೂ ಪುತ್ರವಾತ್ಸಲ್ಯದಿಂದ ಸಲಹಿದ ಮಹಾಪ್ರಧಾನ ಅಪ್ಪಾಜಿಯವರು ಕಳೆಗುಂದಿ ಕೊರಗುತ್ತಿದ್ದಾರೆ.

ಚಿನ್ನಾ:—ರೋಗವು ಮತ್ತೆ ಮರುಕಳಿಸಿತೆ? ಮೊನ್ನೆ ರಾತ್ರಿಯ ವರೆಗೂ ಸ್ವಸ್ಥವಾಗಿದ್ದರೆಂದು ಕೇಳಿದ್ದೆ. ರೋಗವು ಗುಣವಾಯಿತೆಂದೇ ಊಹಿಸಿದ್ದೆ. ಆದರಿಂದಲೇ ಸರಸವಾಡಿದೆ. ಅಪರಾಧವಾಯಿತು.

ಕೃಷ್ಣ:—ವೈದ್ಯರು ಹೇಳವುದನ್ನು ಕೂಡ ಉಲ್ಲಂಘಿಸುತ್ತಿದ್ದಾರೆ. ತಂದೆಯವರು ಮೃತರಾದಾಗಿನಿಂದಲೂ ದಂಗೆಗಳನ್ನಡಗಿಸಲು ಏಕಪ್ರಕಾರವಾಗಿ ಯುದ್ಧ ಮಾಡಿದರು. ರಣರಂಗದಲ್ಲಿ ಇಷ್ಟು ಕಾಲವನ್ನು ಕಳೆಸೂ ವ್ಯರ್ಥವಾಯಿತೆಂಬ ಮನೋರೋಗವು ದೇಹದ ವ್ಯಾಧಿಯನ್ನೂ ಮೀರಿಸಿದೆ.

ಚಿನ್ನಾ:—ಬಲಿಷ್ಠರಾದ ತಮ್ಮಂದಿರನ್ನು ಪಡೆದು ಅವರಿಗೇಕೆ ಮನೋವ್ಯಥೆ, ಪ್ರಿಯ? ನೀವು ಮತ್ತೆ ರಣರಂಗಕ್ಕೆ ಸುಗ್ಗಕೂಡದೆ? ಈ ಸಲ ನೀವು ಯುದ್ಧಕ್ಕೆ ಹೊರಟರೆ, ಅಕ್ಕನೂ ನಾನೂ ಬಂದೇ ಬರುತ್ತೇವೆ. ವೀಣೆಯನ್ನು ಬಿಟ್ಟು ಖಡ್ಗವನ್ನು ಧರಿಸಿ, ನಾವು ಕಲಿತಿರುವ ಶಸ್ತ್ರವಿದ್ಯೆಯಲ್ಲಿ ರಾಜ್ಯಲಕ್ಷ್ಮಿಗೆ ಸೇವೆ ಸಲ್ಲಿಸುತ್ತೇವೆ.

ಕೃಷ್ಣ:—(ಸಂತೋಷದಿಂದ ಚಿನ್ನಾದೇವಿಯ ಭುಜದ ಮೇಲೆ ಕೈಹಾಕಿ) ಆಗಬಹುದು....ಆದರೆ ಅಣ್ಣನವರಿಗೆ ಕ್ರೌರ್ಯದಲ್ಲಿ ಮನಸ್ಸು. ಆದರ ಪರಿಣಾಮವಾಗಿ ನಾಳೆ ಏನಾಗುವುದೋ ಎಂದು ಕಳವಳ. ಸಾಮ್ರಾಜ್ಯವನ್ನು ಆಳುವುದು ಬಾಹುಬಲವೊಂದರಿಂದಲೇ ಸಾಧ್ಯವಿಲ್ಲ, ಚಿನ್ನಾ.

ಚಿನ್ನಾ:—ನಾಳೆ ಏನಾಗುವುದೋ ಎಂದು ಕಳವಳವೆಂದಿರಿ?

ಕೃಷ್ಣ:—ಮಲೆನಾಡು ಸೀಮೆಯ ಕಳಸ ಕಾರ್ಕಳ ನಾಡಿನ ಒಡೆಯರಾದ ಇಮ್ಮಡಿ ಭೈರರಸನೆಂಬಾತನನ್ನ ಕಾರಾಗೃಹದಲ್ಲಿಡಿಸಿದ್ದಾರೆ. ನಾಳೆ ಆತನ ವಿಚಾರಣೆ. ಆತನು ನಿರಪರಾಧಿಯಂತೆ. ನಿರಪರಾಧಿಯ ಕೊಲೆಯೆಲ್ಲಿ ನಡೆಯುವುದೋ ಎಂದು ಕೊರಗುತ್ತಿದ್ದೇನೆ. ಮುಂದೆ ಅನರ್ಥಪರಂಪರೆಗಳೆಲ್ಲಿ ಆಡಸುವುವೋ ಎಂದು ತಲ್ಲಣವಾಗುತ್ತಿದೆ.

ಚಿನ್ನಾ:—ವಿಚಾರಣೆಯ ಕಾಲದಲ್ಲಿ ನೀವು ಅಲ್ಲಿದ್ದು ಸಲಹೆ ಕೊಡಬಹುದಲ್ಲವೇ?

ಕೃಷ್ಣ:—ಸಲಹೆ ಕೊಡಬೇಕೆಂದಿರುವೆನು. ಆದರೆ ನನ್ನ ಸಲಹೆಗೆ ಪುರಸ್ಕಾರವೋ ತಿರಸ್ಕಾರವೋ ತಿಳಿಯದು....ದೊಡ್ಡದೊಂದು ಅವಮಾನ ಶಲ್ಯವೂ ನನ್ನನ್ನು ಬಾಧಿಸುತ್ತಿದೆ ಚಿನ್ನಾ.

ಚಿನ್ನಾ:—(ನಿಟ್ಟುಸಿರು ಬಿಟ್ಟು)ನಾನು ಮೊದಲೇ ಅರಿಕೆಮಾಡಿಕೊಂಡಿದ್ದೆ ಪ್ರಭು, ವೇಶ್ಯಾಕುಲದವಳಾದ ನನ್ನನ್ನು ಪತ್ನಿಯಂತೆ ಭಾವಿಸಿ ಅನರ್ಥವನ್ನು ತಂದುಕೊಳ್ಳಕೂಡದೆಂದು. ಈಗಲೂ ತಮ್ಮ ಹಿತಕ್ಕಾಗಿ ಅವಶ್ಯವಾದರೆ....

ಕೃಷ್ಣ:—ನಮ್ಮ ಹಿತಕ್ಕಾಗಿ ಯಾವುದೂ ಅವಶ್ಯವಿಲ್ಲ. ಚಿನ್ನಾ, ಅವರವರ ಯೋಚನೆ ಅವರವರಿಗೆ. ಪೂಜ್ಯರಾದ ತಂದೆಯವರು, ಉದಯಗಿರಿಯನ್ನು ಉಕ್ಕಲದ ಗಜಪತಿರಾಜರಿಂದ ಸ್ವಾಧೀನ ಪಡಿಸಿಕೊಂಡಿದ್ದರು. ಈಗಿನ ಗಜಪತಿ ಪ್ರತಾಪರುದ್ರರಾಯರು ಆ ಕೋಟೆಯನ್ನು ಈಗ ಮತ್ತೆ ಸ್ವಾಧೀನ ಪಡಿಸಿಕೊಂಡಿದ್ದಾರೆ. ಈ ಅವಮಾನ ಶಲ್ಯವು ನನ್ನನ್ನು ಬಾಧಿಸುತ್ತಿದೆ.

ಸೇವಕಿ:—(ಪ್ರವೇಶಿಸಿ) ಮಹಾಪ್ರಧಾನರು—ಅಪ್ಪಾಜಿಯವರು---ದಯಮಾಡಿಸಿದ್ದಾರೆ. (ಚಿನ್ನಾದೇವಿಯ ಕಡೆಗೆ ತಿರುಗಿ) ಅವರು ಅಗತ್ಯವಾಗಿ ತಮ್ಮನ್ನು ಏಕಾಂತದಲ್ಲಿ ನೋಡಲೇಬೇಕಂತೆ.

ಕೃಷ್ಣ:—ಏನೋ ಪ್ರಬಲವಾದ ರಾಜಕಾರ್ಯವಿರಬೇಕು. ಅವರು ಎಂದಾದರೂ ಇಲ್ಲಿಗೆ ಬಂದುದುಂಟೆ?

ಚಿನ್ನಾ:—ಇಲ್ಲ. ಎಂದೂ ಬಂದವರಲ್ಲ. ನನಗೇ ಆಶ್ಚರ್ಯವಾಗಿದೆ.

ಕೃಷ್ಣ:—(ನೇಪಥ್ಯದ ಕಡೆ ಕೈತೋರಿ) ನಾನು ಅಲ್ಲೆ ಮರೆಯಾಗಿರುತ್ತೇನೆ.

ಚಿನ್ನಾ:—(ಸೇವಕಿಗೆ)ಅಪ್ಪಾಜಿಯವರನ್ನು ಬರಮಾಡು.

(ಸೇವಕಿ ಹೋಗುವಳು. ಕೃಷ್ಣದೇವರಾಯನೂ ಮರೆಯಾಗುವನು.)

ಅಪ್ಪಾಜಿ:—(ಪ್ರವೇಶಿಸಿ) ಚಿನ್ನಾದೇವಿ, ನಾನು ಬಂದುದು ನಿನಗೆ ಆಶ್ಚರ್ಯವನ್ನುಂಟುಮಾಡಿರಬೇಕು.

ಚಿನ್ನಾ:—ತಮ್ಮ ಪಾದಧೂಳಿಯಿಂದ ಈ ಉದ್ಯಾನವೇ ಪವಿತ್ರವಾಯಿತು. ನಾನೂ ಧನ್ಯಳಾದೆ. ದಯಮಾಡಬೇಕು. ಕುಳಿತುಕೊಳ್ಳಬೇಕು.

ಅಪ್ಪಾಜಿ:—ಉಪಚಾರವು ಹಾಗಿರಲಿ, ನಾನು ಎಷ್ಟು ಮಟ್ಟಿನ ನಿಷ್ಠುರತೆಯಿಂದ ಬಂದಿರುವೆನೆಂಬುದನ್ನರಿತರೆ....

ಚಿನ್ನಾ:—(ನಡುವೆ ಬಾಯಿ ಹಾಕಿ) ತಂದೆಯ ನಿಷ್ಠುರತೆಯೂ ಮಕ್ಕಳಿಗೆ ಪರಮಾನುಗ್ರಹವಲ್ಲವೇ ತಾನೆ!

ಅಪ್ಪಾಜಿ:—ನಾನು ನಿನ್ನಿಂದ ಒಂದು ಕೆಲಸವಾಗಬೇಕೆಂದು ಬಯಸಿದರೆ ನೀನು ಮಾಡಿಕೊಡುವಿಯಷ್ಟೆ?

ಚಿನ್ನಾ:—ಅಗತ್ಯವಾಗಿ ಮಾಡಿಕೊಡುವೆನು. ಸಂಶಯವೇಕೆ?

ಅಪ್ಪಾಜಿ:—ಹಾಗಾದರೆ ಕೇಳು. ಸಾಮ್ರಾಜ್ಯದ ಸೇವೆಯನ್ನು ತ್ರಿಕರಣ ಶುದ್ಧವಾಗಿ ನೆರವೇರಿಸುವುದಾಗಿ ಪ್ರತಿಜ್ಞೆ ಮಾಡಬೇಕು.

ಚಿನ್ನಾ:—(ನಕ್ಕು) ಅಷ್ಟೇ ತಾನೆ? ಭಗವಾನ್ ವಿರೂಪಾಕ್ಷನ ಪಾದ ಸಾಕ್ಷಿಯಾಗಿ ಹಾಗೆ ಮಾಡುವೆ.

ಅಪ್ಪಾಜಿ:—ಕೃಷ್ಣದೇವರಾಯರ ಕಾರ್ಯಕ್ಕಾಗಿ ವೀಣೆಯನ್ನೂ ತಾಳ ಮೇಳಗಳನ್ನೂ ಬಿಟ್ಟುಬಿಡಬಲ್ಲೆಯೊ?

ಚಿನ್ನಾ:—ಪ್ರಾಣವನ್ನೇ ಬೇಕಾದರೂ ಬಿಟ್ಟುಬಿಡಬಲ್ಲೆ.

ಅಪ್ಪಾಜಿ:—ಇನ್ನು ತಾಳ ಗೆಜ್ಜೆಗಳಿಗೆ ಮೌನ. ಕೌಶೇಯಕ್ಕೆ ಬದಲು ಕವಚ. ಕೋಮಲವಾದ ಹೂದಂಡೆಗಳನ್ನು ಹಿಡಿದು ಆನಂದಿಸುವ ಕೈಗಳಿಂದ ಕರ್ಕಶವಾದ ಖಡ್ಗಚಾಲನ. ಇವಿಷ್ಟೂ ಸಮ್ಮತವೆ?

ಚಿನ್ನಾ:—ಅಗತ್ಯವಾಗಿ, ಸಂತೋಷದಿಂದ.

ಅಪ್ಪಾಜಿ:—ಕರ್ಣಾಟಕ ಸಾಮ್ರಾಜ್ಯಕ್ಕೆ ಜೀವಕಳೆಯನ್ನು ತುಂಬಲು ಧರ್ಮಸಚಿವನೊಬ್ಬನ ಸಹಾಯ ದೊರೆತಿದೆ. ಉದಯಗಿರಿ, ಕೊಂಡವೀಡು, ರಾಯಚೂರು ಕೋಟೆಗಳನ್ನು ಕೃಷ್ಣದೇವರಾಯರು ಕೈವಶಮಾಡಿಕೊಳ್ಳಬೇಕು. ಅದು ನೆರವೇರುವವರೆಗೂ ನಾವು ವೀರರೆಂಬ ಹೆಸರಿಗೇ ಅರ್ಹರಲ್ಲ. ಸಾರ್ವಭೌಮರಿಗೆ ಸ್ವಲ್ಪ ಆರೋಗ್ಯವಾದೊಡನೆಯೇ ಕೃಷ್ಣದೇವರಾಯರು ವಿಜಯಪ್ರಯಾಣ ಮಾಡಬೇಕು. ಮೊದಲು ಶಿವನ ಸಮುದ್ರದ ದಂಗೆಯನ್ನು ಅಡಗಿಸಬೇಕು.

ಚಿನ್ನಾ:—(ಮಂದಹಾಸದಿಂದ) ನಾನು ಮಾಡಬೇಕಾದ ಕೆಲಸ?

ಅಪ್ಪಾಜಿ:— ಕೃಷ್ಣದೇವರಾಯರನ್ನು ಪರಿಣಯವಾದ ಪತಿಯಂತೆ

ಭಾವಿಸಿ, ಅವರ ನೆರಳಿನಂತೆ ನೀನೂ ತಿರುಮಲದೇವಿಯೂ ರಣಭೂಮಿಗೆ ನಡೆಯಬೇಕು. ನಿಮಗಿರುವ ರಣಪಾಂಡಿತ್ಯದಿಂದ ಅವರೂ ಬೆರಗಾಗುವಂತೆ ಯುದ್ಧ ಮಾಡಬೇಕು. ನಾನೇ ಒಂದು ವೇಳೆ ಅವರೊಡನೆ ಯುದ್ಧಕ್ಕೆ ಬರುವ ಸ್ಥಿತಿಯೊದಗಿದರೂ ವೃದ್ಧನೆಂಬ ಅನುಕ್ರೋಶವೂ ಇಲ್ಲದೆ ನೀನು ನನ್ನ ರುಂಡವನ್ನು ಹಾರಿಸುವುದಕ್ಕೂ ಸಿದ್ಧಳಾಗಿರಬೇಕು. ಲಾಸ್ಯಗೀತಗಳಲ್ಲಿ ಮುಳುಗಿರುವ ನಿನ್ನ ಕುಸುಮ-ಕೋಮಲ-ಹೃದಯವು ರಣರಂಗದ ಭೀಕರ ಸ್ಥಿತಿಯಿಂದಲೂ ಕದಲದೆ ಪಾಷಾಣಖಂಡವಾಗಿ ಪರಿಣಮಿಸಬೇಕು. ನಿನ್ನ ರಕ್ತ ಕಣಗಳೆಲ್ಲ 'ಕೃಷ್ಣದೇವರಾಯ, ಕೃಷ್ಣದೇವರಾಯ' ಎಂದು ಸಂತತವೂ ಜಪಮಾಡುತ್ತಿರಬೇಕು. ರಾಜ್ಯಲಕ್ಷ್ಮಿಯ ಸೇವೆಗೆ ನಿನ್ನ ಪ್ರಾಣವೂ ಮೀಸಲಾಗಬೇಕು. ಮಗಳೇ, ಸಮ್ಮತವೋ? ಸಲ್ಲಿಸುವಿಯಾ ನನ್ನ ಅಭೀಷ್ಟವನ್ನು?

**ಚಿನ್ನಾ:**—(ಸಂತೋಷ ಸುಮ್ಮಾನಗಳಿಂದ) ಸಮ್ಮತ ಗುರುವೆ. ಸಮ್ಮತ ತಂದೆ. ಸೇವೆಗೆ ಸಿದ್ಧವಾಗಿದ್ದೇನೆ. ಧೂಳಿನಲ್ಲಿದ್ದವಳನ್ನು ದೇವಗಂಗೆಯೊಳಗೆ ಮೀಯಿಸುವಿರಿ. (ಕಂಬನಿದುಂಬಿ) ಅಬ್ಬ! ಏನು ಪುಣ್ಯ ಕನ್ನಡಿಗರದು! ನಿಮ್ಮನ್ನು ಮಹಾಪ್ರಧಾನರಾಗಿ ಪಡೆದಿರುವುದು ಎಷ್ಟು ದೊಡ್ಡ ಭಾಗ್ಯ!

**ಕೃಷ್ಣ:**—(ಪ್ರವೇಶಿಸಿ ನಮಸ್ಕರಿಸಿ) ಅಪ್ಪಾಜಿ, ತಾವು ನಿಜವಾಗಿಯೂ ತಂದೆಯ ಸಮಾನರು.

**ಅಪ್ಪಾಜಿ:**—ನೀವಿದ್ದುದನ್ನು ನಾನರಿತಿರಲಿಲ್ಲ....ನಾನೊಂದು ಜೀವ ರತ್ನವನ್ನು ಸಂಪಾದಿಸಿದ್ದೇನೆ. ಹೇಳಬೇಕಾದುದು ಬಹಳವಿದೆ.

**ಕೃಷ್ಣ:**—ಎಂದರೆ?

**ಅಪ್ಪಾಜಿ:**—ಹೇಳುತ್ತೇನೆ. ಬನ್ನಿ ಹೋಗೋಣ. (ಎಲ್ಲರೂ ಹೋಗುವರು)

[ತೆರೆ ಬೀಳುವುದು]

—

## ದೃಶ್ಯ ೨

[ತೆನಾಲಿಯಲ್ಲಿ ರಾಮಲಿಂಗಯ್ಯನ ಮನೆ. ಬಡತನಕ್ಕೆ ತಕ್ಕಹಾಗಿರುವ ಮತ್ತು ದಾರಿದ್ರ್ಯವು ಹೆಚ್ಚುತ್ತಿರುವುದನ್ನು ಸೂಚಿಸುತ್ತಿರುವ ವಸ್ತುಗಳಿರುವುವು. ರಾಮಲಿಂಗಯ್ಯನ ಹೆಂಡತಿ ಕಮಲೆಯು ಒಂದು ಓಲೆಗರಿಯ ಪುಸ್ತಕವನ್ನು ಹಿಡಿದು ತಿರುಗಿಸಿ ನೋಡುತ್ತಿರುವಳು.]

**ಕಮಲೆ:**—ಈ ಗ್ರಂಥವನ್ನು ಎಷ್ಟು ಚೆನ್ನಾಗಿ ಬರೆದಿದ್ದಾರೆ! 'ರಾಮಲಿಂಗಾರ್ಯ ವಿರಚಿತ, ರಾಮಲಿಂಗಾರ್ಯ ವಿರಚಿತ' ಎಂಬ ಮಾತುಗಳು ನನ್ನ ಕಿವಿಗೆ ಅಮೃತವನ್ನೇ ಎರೆಯುತ್ತಿವೆ. ತಾಯಿ ತುಂಗಭದ್ರೆಯನ್ನು ಎಷ್ಟು ಚೆನ್ನಾಗಿ ವರ್ಣಿಸಿದ್ದಾರೆ! ಇಷ್ಟು ಚೆನ್ನಾಗಿ ಬರೆದಿರುವ ಪುಸ್ತಕವನ್ನು ಹಿಂದೆ ವಿಜಯನಗರಕ್ಕೆ ತೆಗೆದುಕೊಂಡು ಹೋದರೆ, ಚಕ್ರವರ್ತಿಗಳಿಗೆ ಒಪ್ಪಿಸುವ ಅವಕಾಶವೇ ದೊರೆಯಬೇಡವೆ? ಪಂಡಿತಶ್ರೇಷ್ಠರಾದ ತಾತಾಚಾರ್ಯರೇ ಅದಕ್ಕೆ ಅವಕಾಶವನ್ನು ತಪ್ಪಿಸಬೇಕೆ? ತಾತಾಚಾರ್ಯರಂಥವರೂ ಕೂಡ ನಮ್ಮ ಭಾಗಕ್ಕೆ ತಾಳೀಮೋತೆಗೆ ಅಡ್ಡವಾಗಿರುವ ಮುಳ್ಳಾಗಬೇಕೆ? [ಗ್ರಂಥವನ್ನು ಗೂಡಿನಲ್ಲಿಟ್ಟು] ದುರದೃಷ್ಟದವರು ಮುಟ್ಟಿದರೆ ಹೊನ್ನೂ ಮಣ್ಣಾಗುವುದು. ಅಯ್ಯೋ! ಇಷ್ಟು ಚೆನ್ನಾಗಿ ತಾಯಿ ತುಂಗಭದ್ರೆಯನ್ನು ಭಕ್ತಿಯಿಂದ ವರ್ಣಿಸಿದರು. ತಾಯಿ ತುಂಗಭದ್ರೆಯು ದಯದಿಂದ ಈ ಸಲ ಬೆಳೆಯೆಲ್ಲಾ ಕೊಚ್ಚಿ ಹೋಗಿ ಉಪವಾಸಕ್ಕೆ ದಾರಿಯಾಯಿತು. ದುರದೃಷ್ಟವಂತರ ದೈವಭಕ್ತಿಗೂ ಕಷ್ಟವೇ ಫಲವೇನೊ? ಅವರು ಇತರರ ಕಷ್ಟಗಳನ್ನು ತಮ್ಮ ಕಷ್ಟಗಳೆಂದು ಭಾವಿಸಿದರು. ವೈರಾಗ್ಯಸಂಪನ್ನರಾದರು. ಪ್ರೀತಿಯಿಂದ ಪರೋಪಕಾರಮಾಡಿ ದರಿದ್ರರಾದರು. ಇರುವ ಸ್ವತ್ತಿನಲ್ಲಿಯೂ ಬೆಳೆಯು ಕೊಚ್ಚಿಹೋಯಿತು. ಎಲ್ಲಿಗೆ ಹೊರಟು ಹೋದರೋ ತಿಳಿಯದು. ಮುಪ್ಪಿನ ಅತ್ತೆ, ಹಾಲುಗಲ್ಲದ ಮಗು, ಇವರ ಪೋಷಣೆಯನ್ನು ನಾನು ಮಾಡುವ ಬಗೆಯಾದರೂ ಹೇಗೆ? ನಾಳೆಗೆ ಅಕ್ಕಿಯೇ ಮುಗಿದು ಹೋಗುವುದಲ್ಲಾ, ದೇವರೆ! ತಾಯಿ ಭುವನೇಶ್ವರಿ! ನಿನ್ನ ಚಿತ್ತ.

**ಮಗ:**—(ಚಿಣ್ಣಿಕೋಲಿನೊಡನೆ ಪ್ರವೇಶಿಸಿ) ಅಮ್ಮಾ! ಅಮ್ಮಾ! ಇವೊತ್ತೂ ನಾನೇ ಗೆದ್ದೆ. ಚಿಣ್ಣಿಕೋಲಿನ ಆಟವೆಷ್ಟು ಸೊಗಸಮ್ಮ!

**ಕಮಲೆ:**—ಎಂದೆಂದೂ ನೀನೇ ಗೆಲ್ಲುತ್ತಿರು, ನನ್ನ ಕಂದ. (ಆಲಿಂಗಿಸಿ) ನೂರಾರು ಕಾಲ ಸುಖವಾಗಿ ಬಾಳು ನನ್ನಪ್ಪ.

**ಮಗ:**—ಅಮ್ಮ! ಯಾರ ಮನೆಗೆ ಹೋದರೂ ಅವರವರ ತಂದೆ ಯಿದ್ದಾರೆ. ನಮ್ಮ ಮನೆಯಲ್ಲಿ ಮಾತ್ರ ನನ್ನ ತಂದೆಯಿಲ್ಲ. ನಮ್ಮ ಮನೆಯಲ್ಲಿಯೂ ಇದ್ದು ನನ್ನ ಮುದ್ದಿಸಿದ್ದರೆ. . ನೀನೊಬ್ಬಳೇ ನನ್ನ ಮುದ್ದಿ ಸುತ್ತೀಯಮ್ಮ.

**ಕಮಲೆ:**—ನಿಮ್ಮ ತಂದೆ ಬಂದರೆ ನನಗಿಂತ ಹೆಚ್ಚಾಗಿ ಮುದ್ದಿಸುತ್ತಾ ರಪ್ಪ. ಊರಿಗೆ ಹೋಗಿದ್ದಾರೆ. ಬೇಗ ಬರುತ್ತಾರೆ.

**ಮಗ:**—ಊರಿಗೆ ಹೋದವರು ಬರುತ್ತಲೇ ಇರುತ್ತಾರಮ್ಮ. ಊರಿಗೆ ಹೋಗುತ್ತಲೇ ಇರುತ್ತಾರೆ; ಬರುತ್ತಲೇ ಇರುತ್ತಾರೆ. ನಮ್ಮ ತಂದೆ ಮಾತ್ರ ಬರಲೇ ಇಲ್ಲ. ಹೊರಟೇ ಹೋದರು.

**ಕಮಲೆ:**—(ಮಗುವಿಗೆ ಕಾಣದಂತೆ ಕಣ್ಣೊರಸಿಕೊಂಡು, ಒಳಕ್ಕೆ ಹೋಗಿ ರೊಟ್ಟಿ ಯನ್ನು ತಂದುಕೊಟ್ಟು) ತಿನ್ನು ಕಂದ, ಬರುತ್ತಾರೆ. ನಿಮ್ಮ ತಂದೆ ಬೇಗ ಬರು ತ್ತಾರೆ (ಪ್ರೀತಿಯಿಂದ ಆಲಿಂಗಿಸಿ) ಬರುತ್ತಾರೆ, ಚಿನ್ನಾ. ನಿನ್ನ ಮುದ್ದುಮುಖ ವನ್ನು ನೋಡಬೇಡವೆ?

**ಮಗ:**—(ತಿಂಡಿಯನ್ನು ತೆಗೆದುಕೊಂಡು) ಮತ್ತೆ ಆಟಕ್ಕೆ ಹೋಗಬೇಕಮ್ಮ, ಜೊತೆಯವರಿಗೂ ಕೊಟ್ಟು ತಿನ್ನಬೇಕಮ್ಮ.

**ಕಮಲೆ:**—ಆಗಲಿ ಮುತ್ತು. (ಹೋಗುವನು. ಕಮಲೆ ನಿಟ್ಟುಸಿರುಬಿಟ್ಟು ಕಂಬನಿಯನ್ನೊರಸಿಕೊಂಡು ಓಲೆಗರಿ ಪುಸ್ತಕವನ್ನು ತೆಗೆದುಕೊಂಡು ಬೇಸರದಿಂದ ಒಂದೆ ರಡು ಸಲ ಅದನ್ನು ಬಿಚ್ಚದೆಯೇ ಇದ್ದಲ್ಲಿಯೇ ತಿರುಗಿಸಿ ಶೂನ್ಯದೃಷ್ಟಿಯಿಂದ ನಿಲ್ಲುವಳು. ಅಷ್ಟರಲ್ಲಿ ಕೊಂಬಿನ ಧ್ವನಿಯಾಗುವುದು) ಇದೇನು ಕೊಂಬಿನ ಧ್ವನಿ! ನಮ್ಮ ಮನೆಯ ಬಳಿ ಕೊಂಬಿನ ಧ್ವನಿಯೆ? ಯಾರೋ ರಾಜಪುರುಷರು ಈ ಮಾರ್ಗವಾಗಿ ಹೋಗುತ್ತಿರಬಹುದು. (ಧರ್ಮಸಚಿವ ಪದವಿಗೆ ತಕ್ಕ ವಸ್ತ್ರಾಭರಣ ಗಳಿಂದ ಪ್ರವೇಶಿಸಿದ ರಾಮಲಿಂಗಯ್ಯನನ್ನು ನೋಡಿ ಚಕಿತಳಾಗಿ ಬೆಚ್ಚಿ ಅವನನ್ನೇ ದೃಷ್ಟಿಸಿ ನೋಡಿ, ಕಣ್ಣುಗಳನ್ನುಜ್ಜಿಕೊಂಡು) ಇದೇನು ಸ್ವಪ್ನವೇ?

**ರಾಮ**:—ಜೀವನವೇ ಒಂದು ಸ್ವಪ್ನ, ಕಮಲಾ. ನೀನು ಹೀಗೆ ಹುಲ್ಲೆಯಂತೆ ಬೆದರುವಿಯೆಂದು ಭಾವಿಸಿಯೇ ನಾನು ಪರಿವಾರದವರನ್ನೆಲ್ಲಾ ಹೊರಗೆ ನಿಲ್ಲಿಸಿ ಬಂದೆ. ಆಕಸ್ಮಿಕವಾಗಿ ಲಭಿಸಿದ ಅತಿ ಸಂತೋಷವೂ ಅತಿ ದುಃಖದಂತೆಯೇ ಹೃದಯವನ್ನು ಹಿಂಡುತ್ತದೆ.

**ಕಮಲೆ**:—(ಸಂತೋಷಕ್ಕೆ ಅರಳಿದ ಮುಖದಿಂದ ಪತಿಯನ್ನೇ ದೃಷ್ಟಿಸಿ ನೋಡಿ) ನಾನು ನೋಡುತ್ತಿರುವುದು ನಿಜವೆ? ದರಿದ್ರರಾಗಿ ಹೊರಟವರು ಧನಿಕರಾಗಿ ಹಿಂತಿರುಗಿರುವಂತಿದೆ. ಇವೆಲ್ಲ ನಿಮ್ಮ ಬಟ್ಟೆಗಳೆ? ಎರವಿನ ಬಟ್ಟೆಗಳ ಹಾಸ್ಯವನ್ನು ಹೂಡಿಲ್ಲವೆ?

**ರಾಮ**:—ತಾಯಿ ಭುವನೇಶ್ವರೀ ದೇವಿಗೇ ಎಲ್ಲವನ್ನೂ ಅರ್ಪಿಸಿಬಿಟ್ಟಿದ್ದೇನೆ, ಕಮಲಾ.

**ಕಮಲೆ**:—(ವ್ಯಂಗ್ಯವಾಗಿ ನಕ್ಕು) ಅದರ ಸಮಾನವಿಲ್ಲ. ಅಗ್ಗ ಸಂಸಾರದ ಭಾರವನ್ನು ವಹಿಸಬೇಕಾದ ಕಷ್ಟವಿಲ್ಲ. ನೋಡಿ, ನಾಡಿದ್ದಿಗೆ ಅಕ್ಕಿಯಿಲ್ಲವೆಂದು ಪೇಚಾಡುವ ಬಡ ಹೆಂಡತಿ. ರಾಜಕುಮಾರನಂತೆ ಅಲಂಕಾರ ಮಾಡಿಕೊಂಡಿರುವ ಧನಿಕ ಗಂಡ. ಇಜ್ಜೊತೆಯಾಯಿತೇ ನಮ್ಮದು!

**ರಾಮ**:—ದೂರದಲ್ಲೇ ನಿಂತಿರುವುದೇಕೆ, ಕಮಲಾ!

**ಕಮಲೆ**:—(ಉಲ್ಲಾಸದಿಂದ) ಹೊಲಿಗೆ ಹಾಕಿ ಹಾಕಿ ದಣಿದಿರುವ ಹಳೆಯ ಸೀರೆಯವಳು,ಚೀನಾಂಬರಧಾರಿಗಳ ಒಳಗೆ ಬರುವ ಬಗೆ ಹೇಗೆಂದು ಸಂದೇಹ.

**ರಾಮ**:—ನಾವು ಈಗ ವಿಜಯನಗರ ಸಾಮ್ರಾಜ್ಯದ ಧರ್ಮಸಚಿವರು ಕಮಲಾ.

**ಕಮಲೆ**:—ನಾವು! ನಾವು ಎಂದರೆ ಯಾರು? ನಾನೂ ಸೇರಿದ್ದೇನೇನು? (ನಗುತ್ತ) ನಾವಿಬ್ಬರೂ ಧರ್ಮಸಚಿವರೇನು? ನಿಮ್ಮದು ಯಾವಾಗಲೂ ಹಾಸ್ಯವೆ. ಎರವಲು ಒಡವೆಗಳನ್ನುಟ್ಟು ಬಂದು ಬಡಪಾಯಿಯಾದ ನನ್ನೊಡನೆ ಹಾಸ್ಯಮಾಡಬೇಕೆ?

**ರಾಮ**:—ಎಲ್ಲರೂ ಬಡಪಾಯಿಗಳೇ. ತಾಯಿ ಭುವನೇಶ್ವರಿಯೊಬ್ಬಳೇ ಭಾಗ್ಯವತಿ.

**ಕಮಲೆ**:—ನೀವು ಹೇಗೂ ವೈರಾಗ್ಯಸಂಪನ್ನರು. ಬಾಯಿತುಂಬ ಮಾತು.

**ರಾಮು**:—ಹಾಗಾದರೆ ಕಿವಿಯಿಂದ ಮಾತಾಡಬೇಕೆ? ಹೋಗಲಿ. ಮಗುವೆಲ್ಲಿ? ಅಮ್ಮ ಎಲ್ಲಿ?

**ಕಮಲೆ**:—(ಸಮೀಪಕ್ಕೆ ಬಂದು) ಅವರು ತಮ್ಮ ಮಗ ಊರಿಗೆ ಬಂದರೆ ಸಾಕೆಂದು ಭಕ್ತಿಯಿಂದ ಬೇಡಿಬರಲು ದೇವಾಲಯಕ್ಕೆ ಹೋಗಿದ್ದಾರೆ. ಮಗು ಇಷ್ಟು ಹೊತ್ತು ತಂದೆಯು ಊರಿಗೆ ಬರಲಿಲ್ಲವೆಂದು ಸಂಕಟಪಟ್ಟು ಆಟಕ್ಕೆ ಹೋಗಿದ್ದಾನೆ. ನಾನು ನಾಡಿದ್ದಿಗೆ ಅಕ್ಕಿಯಿಲ್ಲವಲ್ಲಾ ಎಂದು ಯೋಚಿಸುತ್ತಿದ್ದೇನೆ. ನೀವು ಬರೆದ ಪಾಂಡುರಂಗ ಮಹಾತ್ಮ್ಯವನ್ನು ತಿರುಗಿಸಿ ನೋಡಿದೆ. ಎಷ್ಟು ಚೆನ್ನಾಗಿ ಬರೆದಿದ್ದೀರೆಂದುಕೊಂಡೆ. ಇಂತಹ ಗ್ರಂಥಕ್ಕೆ ಸನ್ಮಾನ ದೊರೆಯಲು ಅವಕಾಶವಿಲ್ಲದೆ ಹೋಯಿತೇ, ಎಂದು ವ್ಯಥೆಪಟ್ಟೆ.

**ರಾಮು**:—(ಗಹಗಹಿಸಿ ನಕ್ಕು) ಯಾವುದಕ್ಕೂ ಕಾಲ ಬರಬೇಕು. ಮೊದಲು ಕಣ್ಣೆದುರಿಗೆ ಹಿಡಿದು ಹಲ್ಲು ಕಿರಿದರೂ ಕಡೆಗಂಡವರಲ್ಲ, ನಾನು ಧರ್ಮ ಸಚಿವನಾದ ಮೇಲೆ ಅದನ್ನು ಹೊಗಳಿ ಹೊಗಳಿ ದಣಿಯುತ್ತಿದ್ದಾರೆ, ಕಮಲಾ.

**ಕಮಲೆ**:—ಈ ಹಗಲು-ವೇಷವನ್ನು ಇನ್ನು ಸಾಕುಮಾಡಬಾರದೆ? ಎರವಲು ಬಟ್ಟೆಗಳನ್ನು ಹಿಂದಿರುಗಿಸಿ. ಹೇಗೂ ಸಕಾಲಕ್ಕೆ ಬಂದಿದ್ದೀರಿ. ಅಕ್ಕಿಯನ್ನು ಸಂಪಾದಿಸುವ ಯೋಚನೆಯನ್ನು ಮಾಡಿ. ಇಂಥ ಅಲಂಕಾರವೂ ಒಡವೆ ವಸ್ತುಗಳೂ ಬಡವರಾದ ನಮಗೇಕೆ? ಯಾರು ಕೊಟ್ಟರೋ ಕಾಣೆನಲ್ಲಾ!

**ರಾಮು**:—ಎಲ್ಲರೂ ಅರಿತರೂ ನೀನು ಮಾತ್ರ ನನ್ನ ಬೆಲೆಯನ್ನು ಗ್ರಹಿಸಲಿಲ್ಲ. ಎಲ್ಲರಿಗೂ ನನ್ನ ಯೋಗ್ಯತೆ ತಿಳಿದರೂ ನಿನಗೆ ಮಾತ್ರ ತಿಳಿಯಲಿಲ್ಲ.

**ಕಮಲೆ**:—ಬೆಲೆಯನ್ನು ಗ್ರಹಿಸಿದ್ದೇನೆ. ಆದರೆ ಧರ್ಮಸಚಿವರೆಂದರೆ ಹೇಗೆ ನಂಬಲಿ? ನೀವು ಹೇಳಿದುದನ್ನೆಲ್ಲಾ ನಂಬಬೇಕೆ?

**ರಾಮು**:—ನಾಳೆಯೇ ವಿಜಯನಗರಕ್ಕೆ ಪ್ರಯಾಣ. ಮನೆಯ ಹೊರಗಿರುವ ಪರಿವಾರವನ್ನೂ ವಾಹನಗಳನ್ನೂ ನೋಡಿಯಾದರೂ ನಂಬಲಾರೆಯಾ? ಕುಣಿಸುವವಳು ಭುವನೇಶ್ವರಿ; ಕುಣಿಯುವವರು ನಾವು.

**ಕಮಲೆ**:—(ಆಶ್ಚರ್ಯ ಸಂತೋಷಗಳಿಂದ) ನಿಜವಾಗಿಯೂ ನೀವು ಧರ್ಮ ಸಚಿವರೆ? ನಿಜವಾಗಿ? ನಿಜವಾಗಿ?

[ತೆರೆ ಬೀಳುವುದು]

—

## ದೃಶ್ಯ ೩

( ಅರಮನೆಯಿಂದ ಬರುವ ಮಾರ್ಗ. ಓಲೆಯಕಾರನೊಬ್ಬನು ಅವಸರವಾಗಿ ಓಡಿ ಬರುತ್ತಿರುವನು. ಕೃಷಿಕನೊಬ್ಬನು ಎದುರುಭಾಗದಿಂದ ಬಂದು ಅವನನ್ನು ಸಂಧಿಸುವನು)

**ಕೃಷಿಕ**:—ಶರಣಾರ್ತಿ ಬರ್ತದೆ. ನಂಗೆ ನಿನ್ನ ಗುರ್ತಿಲ್ಲ. ಆದರೂನೆ··

**ಓಲೆಕಾರ**:—(ದರ್ಪದಿಂದ) ನಿಂಗೆ ನನ್ನ ಗುರ್ತಿಲ್ಲ. ನಿಜವೇ ನಿಜ. ನಂಗೆ ನಿನ್ನ ಗುರ್ತು ಬೇಕೂ ಇಲ್ಲ. ನೀನು ಹಂಗೇ, ಹಂಗೇ, ಬಂದ ಹಂಗೇ ಹೊರಡು.

**ಕೃಷಿಕ**:—ಹಿಂಗೆ ಗಡಿಬಿಡಿ ಮಾಡಿದ್ರೆ, ನಾನು ಆಡಬೇಕೆಂದಿರೋ ಮಾತೆಲ್ಲಾ ಮರೆತುಬಿಡೋದೆ ಸೈ.

**ಓಲೆ**:—ಹಂಗೆ ಮಾಡಿದ್ರೆ ಇಬ್ಬರಿಗೂ ಉಪಕಾರ. ನಂಗೆ ಕೇಳೋ ಕಷ್ಟವಿಲ್ಲ. ನಿಂಗೆ ಹೇಳೋ ಕಷ್ಟವಿಲ್ಲ. ಇಬ್ಬರ್ಗೂ ಸರಾಗ.

**ಕೃಷಿಕ**:—ನಾನು ಮಲೆನಾಡು ಕನ್ನಡ ಸೀಮೆ. ಕಳಸ ಕಾರ್ಕಳದ ಕಡೆಯಿಂದ ಬಂದೆ......

**ಓಲೆ**:—ಅದಕ್ಕೇನ್ಮಾಡು ಅಂತೀಯಾ? ನಡೆ-ಮುಡಿ ಹಾಸಬೇಕೋ, ಹಗಲು-ದೀವಟಿಗೆ ಹಿಡಿಸಬೇಕೋ, ಇಡಿಗಾಯಿ ಒಡೆಯಿಸಬೇಕೋ, ಆರತಿ ಮಾಡಿಸಬೇಕೋ, ಏನ್ಮಾಡಬೇಕೂ ಅಂತೀಯ?

**ಕೃಷಿಕ**:—ತುಸು ನಿಧಾನವಾಗಿ ಮಾತನಾಡಯ್ಯ.

**ಓಲೆ**:—ನಂಗೆ ನಿಧಾನವಿಲ್ಲ. ದೊರೆಗಳಿಗೆ ಗುಣವಾಗಿದ್ದ ರೋಗ ಮರುಕಳಿಸಿತು. ಇವತ್ತು ಬಲು ರಗಳೆಗಿಟ್ಟೈತೆ. ದೊಡ್ಡ ಮಂತ್ರ್ಯೋರಿಗೆ ಅರಿಕೆ ಮಾಡಿ ಈಗಲೆ ಕರೆತತ್ತಾ ಅಂತ ಅಪ್ಪಣೆ ಆಗೈತೆ. ನಿನ್ನ ಬಳಿ ಚಕ್ಕಂದ ಆಡೋಕೆ ಸಮಯಾ ನಂಗೆ?

**ಕೃಷಿಕ:**—ಯಾರಿಗೆ ರೋಗ? ನಿಮ್ಮ ದೊರೆಗಳ್ಗೊ? ನಮ್ಮ ದೊರೆಗಳ್ಗೊ?

ಓಲೆ:—ಎಲ್ಲಿ ಹಳ್ಳಿಯ ಮುಕ್ಕನೋ ನೀನು? ನಂಗೂ ನಿಂಗೂ ದೊರೆ ಆಗಿರೋರಿಗೆ ರೋಗ. ಎಲ್ಲರಿಗೂ ದಿಗಿಲು ಹತ್ಕೈತೆ.

**ಕೃಷಿಕ:**—ಅಯ್ಯೋ! ನಮ್ಮ ಭೈರರಸಪ್ಪಾ! ಕೊನೆಗೂ ಇಂಗಾಯ್ತಾ? ನಮಗೆಲ್ಲ ತಂದೆಗೆ ಬದ್ಲು ತಂದೆಯೋ ಅನ್ನೊ ಹಂಗಿದ್ದೆ! ನಮ್ಮಪ್ಪಾ! ಬೇರೆ ಊರಿಗೆ ಬಂದು ಸೆರೆಮನ್ಯಾಗ ಪರಾಣ ಬಿಡೋ ಹೊತ್ತು ಬಂತಾ, ನಿಂಗೆ? ಹಾಳ ಯುದ್ಧ. ಮಲಕಾಡು ಯುದ್ಧ. ಈ ಹಾಳು ಯುದ್ದಾನ ದೇವರು ಎಂದು ನಾಶ ಮಾಡಾನೋ ಕಾಣೆ. ಅಯ್ಯೋ! ಭೈರರಸಾ! (ಅಳುವನು)

ಓಲೆ:—ಯಾರೋ ನಿನ್ನ ಭೈರರಸರಿಗೆ ರೋಗ ಅಂದೋರು? ಒಳ್ಳೇ ಹೆಣ್ಣು ಹೆಂಗಸಿನ ಹಾಂಗೆ ಇವನು ಅಳೋದು ನೋಡ್ರೋ! (ಚಂಡಮಲ್ಲಿಗೆ ಹೂ ಮುಡಿದಿರುವ ಅವನ ಜಡೆಯನ್ನು ತನ್ನ ಕೈಲಿರುವ ಕೋಲಿನಿಂದ ಅಲ್ಲಾಡಿಸಿ) ಹೆಂಗೂ ಹಿಂದೆ ಜಡೆ ಐತೆ. ಮುಂದಲೇನೂ ಬಾಚಿಕೊಂಡು ಸೀರೆ ಉಟ್ಟು ಕೊಳ್ಳೊ. ಅಯ್ಯೊ, ಹೆಣ್ಣಿಗ!

**ಕೃಷಿಕ:**—ನೀನು ಗಂಡಸಿನ ಹೊಟ್ಟೇಲಿ ಹುಟ್ಟಿರೋನೋ ಏನೋ! ಆದಿರ್ಲಿ. ಹಂಗಾದರೆ ನಮ್ಮ ದೊರೆ ಭೈರರಸ ದ್ಯಾವರಿಗೆ ರೋಗವಿಲ್ಲ ತಾನೆ? ನೀನು ನೂರು ವರ್ಷ ಬದುಕು ನಮ್ಮಪ್ಪ. ಯಾರಿಗೆ ರೋಗ ಅಂಗಾದ್ರೆ? ನಮ್ಮ ಭೈರರಸ ಒಡೆಯರು ನಮ್ಮ ಜೀವ, ನಮ್ಮ ತಂದೆ, ನಮ್ಮ ದೇವರು.

ಓಲೆ:—ನಿಂಗೂ, ನಂಗೂ, ನಿಮ್ಮ ಭೈರರಸ ದ್ಯಾವರ್ಗೂ, ಎಲ್ಲಾರ್ಗೂ ದೊರೆಗಳಾಗಿದ್ದಾರಲ್ಲಾ, ವೀರನರಸಿಂಹರಾಯ ಚಕ್ರವರ್ತಿಗಳು, ಅವರಿಗೆ ರೋಗ. ಆದಿರಲಿ. ಏನೋ ನೀನು ಕೇಳಬೇಕೆಂದಿದ್ದದ್ದು?

**ಕೃಷಿಕ:**—ನಮ್ಮ ದೊರೆಗಳನ್ನು ಎಲ್ಲಿ ಸೆರೆಯಲ್ಲಿಟ್ಟಿರೋದು ಹೇಳಪ್ಪ? ನಾನು ಅವರ ದರ್ಶಣ ಮಾಡಿ ಪುಣ್ಯ ಪಡೆಯಬೇಕೆಂತ ಬಂದೆ. ಈ ಊರು ಸಂಪತ್ತು, ಏನು ಸಂಪತ್ತಯ್ಯ! ದೇವಲೋಕ ಹಿಂಗೇ ಇರಬಹುದೋ ಏನೋ? ಈ ಊರು ಕೋಟೆ ಚಕ್ರಭೀಮಣ್ಣನ ಕೋಟೆ ಹಂಗೈತೆ. ಸುತ್ತೀ ಸುತ್ತೀ ಕಾಲೆಲ್ಲ ಬಿದ್ದುಹೋಯ್ತು. ಸೆರೆಮನೆ ಬೇರೆ ಸಿಕ್ಲಿಲ್ಲ. ತೋರಿಸ್ತೀ ಏನಯ್ಯ?

**ಓಲೆ:**—ಕಾವಲುಗಾರರು ನಿನ್ನ ಸೆರೆಮನೆಗೆ ಬಿಡೋದೇ ಇಲ್ಲ. ನಿಮ್ಮ ದೊರೇನ ಈಗ ಅರಮನೇಗೆ ಕರಕೊಂಡು ಬರ್‍ತಾರೆ. ದಾರಿಯಲ್ಲಿ ಕಾದಿದ್ದು ನೋಡುವಂತೆ, ನಡಿ.

**ಕೃಷಿಕ:**—ಇಷ್ಟಾರ ಹೇಳಿದೆಯಲ್ಲ. ನೂರು ಕಾಲ ಬದುಕು ನಮ್ಮಪ್ಪ. ನಾನು ಅವರ ಪಾದ ಕಂಡರೆ ಸಾಕು. ಆದಿರ್ಲಿ. ಇನ್ನೊಂದು ಉಪಕಾರ ಆಗಬೇಕಲ್ಲ? ಅದ್ಯಾರೋ ತೆನಾಲಿ ರಾಮಲಿಂಗಯ್ಯನವರಂತೆ. ಅವರ ದರ್ಶಣ ಆಗಬೇಕಲ್ಲ. ಅವರನ್ನೂ ತೋರಿಸಯ್ಯ.

**ಓಲೆ:**—ನಿನ್ನ ಅದೃಷ್ಟ. ಅವರು ಇವೊತ್ತು ವಖ್ಯಾನಾದಲ್ಲಿ ಬರದೆ, ಒಬ್ಬರೇ ಅಪ್ಪಾಜಿಯವರ ಮನೆಗೆ ಹೊರಟು ಬರ್‍ತಾರ್ ಇದ್ದಾರೆ. ಹಿಂದೆ ನಿಧಾನವಾಗಿ ಬರ್‍ತಾರ್ ಇದ್ರು. ನಾನು ಓಡಿ ಬಂದೆ. ಧಪ್ಪಕ್ಕೆ, ಗುಂಡಕ್ಕೆ ಕುಂಬಳ ಹಣ್ಣಿನಂಗವರೆ. ಅವರು ದೇವರಂಥವರು. ಜಂಭಾನೇ ಇಲ್ಲ. ಮಕ್ಕಳ ಮನಸು. ದರ್ಶಣ ತೊಕೋ. ನಾನು ಹೋಗ್ತೀನಿ. (ಹೋಗುವನು)

**ಕೃಷಿಕ:**—(ರಾಮಲಿಂಗನು ಪ್ರವೇಶಿಸಿದುದನ್ನು ಕಂಡು) ಬುದ್ಧಿ! ಕಾಲಿಗೆ ಬಿದ್ದೆ. ನಾನು ಮಲೆನಾಡು ಸೀಮೆಯೋನು (ನಮಸ್ಕರಿಸಿ) ನನ್ನ ಕೆಲಸ ಮಾಡಿ ಕೊಡೋದಾಗಿ ಭಾಷೆ ಕೊಟ್ರೆ ನಾನು ಈ ಪಾದ ಬಿಡೋದು. ನನ್ನ ಪಾಲಿಗೆ ಇವು ದೇವರ ಪಾದಗಳು, ನನ್ನೊಡೆಯ !

**ರಾಮು:**—ಏಳಯ್ಯಾ, ಮೇಲಕ್ಕೇಳು. ನನ್ನಿಂದ ಸಾಧ್ಯವಿದ್ದರೆ ಮಾಡಿ ಕೊಡುತ್ತೇನೆ. ಏಳು.

**ಕೃಷಿಕ:**—(ಮೇಲಕ್ಕೆದ್ದು) ಇನ್ನು ನಾನು ಗೆದ್ದೆ, ನನ್ನೊಡೆಯ. ಅಪ್ಪಾಜಿ ಯವರಂತೆ, ದೊಡ್ಡ ಮಂತ್ರಿಗಳಂತೆ. ಅವರನ್ನು ನೋಡೋಣವೆಂತ, ಕಾಡೂ ಮೇಡೂ ತಿರುಗಿ, ಔಗು ನೀರು ಕುಡಿದು, ಒಣ ರೊಟ್ಟಿ ಕಡಿದು, ದೂರ ದೇಶದಿಂದ ಬಂದೆ. ನೋಡೋಕೆ ಸಿಕ್ಕಲಿಲ್ಲ. ನಿಮ್ಮನ್ನು ನೋಡಿದ್ರೆ ನನ್ನ ಕೆಲಸ ಆಗ್ತದೆ ಅಂತ ಜನ ಹೇಳಿದ್ರು. ಒಬ್ಬ ಓಲೆಕಾರ ತಾವೇ ರಾಮಲಿಂಗಯ್ಯ ನೋರು ಅಂತ ತೋರಿಸಿದ. ನನ್ನ ರೊಟ್ಟಿ ಜಾರಿ ತುಪ್ಪಕ್ಕೇ ಬಿತ್ತು.

**ರಾಮು:**—ನನ್ನಿಂದ ಏನಾಗಬೇಕು, ಹೇಳಯ್ಯ? ಅಪ್ಪಾಜಿಯವರನ್ನು ನೀನೇಕೆ ನೋಡಬೇಕು?

**ಕೃಷಿಕ:**—ನಮ್ಮ ದೊರೆ ಭೈರರಸ ಒಡೆಯರನ್ನು ನಿಮ್ಮ ಕಡೆಯವರು ಸೆರೆಹಿಡಿದು ತಂದವರೆ. ಅವರು ದಂಗೆಗೆ ಖಂಡಿತ ಸೇರಲಿಲ್ಲ. ನಿಮ್ಮ ಕಡೆಗೇ ಸಹಾಯಕ್ಕೆ ಸೈನ್ಯ ತರೋರನ್ನ ತಪ್ಪು ತಿಳಿದು ಸೆರೆಗೆ ಹಾಕವರೆ. ಅವರು ನಿಮ್ಮ ಹಂಗೇ ಚಿನ್ನದಂತ ಮನುಸರು. ಅಪ್ಪಾಜಿಯೋರು ಜನಕೆಲ್ಲ ತಂದೆ ಹಂಗವರೆ ಅಂತ ಕೇಳಿದ್ದೀನಿ. ಅವರಿಗೆ ಹೇಳುವ ಅಂತ ಬಂದೆ. ದೊಡ್ಡ ದೊರೆಗಳು ಕೋಪಿಸಿಕೊಂಡವರೆ. ನಮ್ಮ ದೊರೆ ತಲೆ ಹಾರಿಸ್ತಾರೆ ಅಂತ ಸುದ್ದಿ ಹೊರಟದೆ. ಹಂಗೇನಾರಾ ನಡೆದರೆ ಧರ್ಮದೇವತೆ ಕಣ್ಣೇ ತಿವಿದ ಹಂಗೆ. ಧರ್ಮದ ಕೆರೆ ಏರೀನ ಒಡೆಸ್ದಂಗೆ. ಏಳೇಳು ಜನ್ಮಕ್ಕೂ ಪಾಪ ತಿಕ್ಕಿ ಮುಕ್ಕಿ ವಂಶಾನೇ ತೊಡೀತದೆ. ಹಾಗೆಂತ ಹೇಳುವಾ ಅಂತ ಬಂದೆ. ನೀವು ದೇವರಾತೋರಂತೆ. ನಮ್ಮ ದೊರೆಯ ಜೀವ ಉಳಿಸಿಕೊಡಿ, ದೇವರು!

**ರಾಮ:**—ಸರಿಯಯ್ಯ. ದೊಡ್ಡ ದೊರೆಗಳ ಇಷ್ಟಕ್ಕೆ ವಿರೋಧವಾಗಿ ನಡೆಯುವುದಕ್ಕೆ ನನಗಾಗಲೀ ಅಪ್ಪಾಜಿಯವರಿಗಾಗಲೀ ಅಧಿಕಾರವಿದೆಯೆ?

**ಕೃಷಿಕ:**—ಇಲ್ದಿ ಹೋದ್ರೆ ಬಿಡಿ ನನ್ನೊಡೆಯ. ಧರ್ಮದ ಕೆರೆ ಏರೀನ ಢಂ ಢಂ ಢಮಾರ್ ಅಂತ ಒಡೀರಿ. ಪಾಪದ ಫಲಾನ ಏಳೇಳು ಜನ್ಮಕ್ಕೂ ಅನುಭವಿಸಿ. ಇಲ್ಲಿರೋ ಕೋಟೆ ಕೊತ್ತಲಗಳಂತೆ ನಿಮ್ಮ ಮನಸೂ ಭಾರಿ ಅಂತಿದ್ದೆ. ಹೋಗಲಿ ಇನ್ನೆರಡು ಉಪಕಾರವಾರೂ ಮಾಡಿ. ಸುಲಭ, ಅವು ಒಲೇ ಸುಲಭ.

**ರಾಮ:**—ಆಗಲಿ ನೋಡೋಣ, ಹೇಳು ಹೇಳು.

**ಕೃಷಿಕ**—(ಅಳುತ್ತ) ನಮ್ಮ ದೊರೆಗಳ ತಲೆ ಕಡಿಸಿದ ಮೇಲೆ ಅವರನ್ನು ಹೂಳೋ ಗುಂಡೀಲೇ ನನ್ನೂ ಜೀವದೊಂದಿಗೇ ಹೂಳಿಸೋದು. ಅವರ ಮಗನಿಗೇ—ಚಿಕ್ಕ ಹುಡುಗ ಅನ್ನೋದು ನೋಡದೆ—ರಾಜ್ಯ ಕೊಡಿ ಸೋದು. ಇವೆರಡಾದ್ರೂ ಮಾಡಿಸಿಕೊಟ್ಟು ಅಷ್ಟಾದ್ರೂ ಪುಣ್ಯ ಕಟ್ಕೊಳ್ಳಿ, ನನ್ನೊಡೆಯ.

**ರಾಮ:**—(ಸ್ವಗತ) ತಾಯೆ, ನಿನ್ನ ಲೀಲೆ! ಆ ಭೈರರಸರು ಇನ್ನೆಷ್ಟು ಒಳ್ಳೆಯವರೊ! (ಪ್ರಕಾಶವಾಗಿ ಹುಸಿ ಬೇಸರದಿಂದ) ಸಾಕಯ್ಯ ನಿನ್ನ ಮಾತು.

**ಕೃಷಿಕ:**—ನನ್ನ ಮಾತು ನಿಮಗೂ ಸಾಕಾಯ್ತೆ? ಶನಿ ವಕ್ಕರಿಸಿದ್ರೆ ಭೂಮಿತಾಯಿ ಕೂಡ ಭುಸ್ ಅಂತಾಳಪ್ಪ. ಕೊಟ್ಟ ಭಾಷೆಗೆ ತಪ್ಪಬೇಡಿ

ನನ್ನೊಡೆಯಾ. ನಮ್ಮ ದೊರೆ ಹೋದ್ರೆ, ನಮ್ಮ ಭಾಗಕ್ಕೆ ಸ್ವಾಮಿ ಮುಳುಗಿ ಹೋದಂಗೆ ಬುದ್ಧಿ.

**ರಾಮ**:—ಅಪ್ಪಾಜಿಯವರ ಮನೆಗೆ ಹೋಗೋಣ ಬಾ. ಸತ್ಯವಾಗಿ ನಡೆದ ಸಂಗತಿಗಳನ್ನು ನಡೆದಂತೆಯೇ ಹೇಳಬೇಕು. ಸಾಧ್ಯವಾದರೆ ಅವಶ್ಯವಾಗಿ ಸಹಾಯಮಾಡುತ್ತೇನೆ. ನಿಮ್ಮ ದೊರೆಯನ್ನು ಉಳಿಸಿಕೊಡುತ್ತೇನೆ.

**ಕೃಷಿಕ**:—(ದಂಡಪ್ರಣಾಮ ಮಾಡಿ) ನಿಮ್ಮ ಹೊಟ್ಟೆ ತಣ್ಣಗಿರಲಿ. ನನ್ನ ಮಾತಿನಾಗೆ ಒಂದೇ ಒಂದು ಸುಳ್ಳು ಒಂದರೂ ಶೂಲಕ್ಕೇರಿಸಿಬಿಡಿ.

**ರಾಮ**:—ಇರಲಿ ಬಾ.

(ಇಬ್ಬರೂ ಹೋಗುವರು)

—

## ದೃಶ್ಯ ೪

[ರೋಗಿಯಾದ ವೀರನರಸಿಂಹ ಸಾರ್ವಭೌಮನು ಒಂದು ಚಿನ್ನದ ಮಂಚದ ಮೇಲೆ ಮಲಗಿರುವನು. ವಿಜಯನಗರ ಸಾಮ್ರಾಜ್ಯಕ್ಕೆ ತಕ್ಕ ವೈಭವದ ನಾನಾ ವಸ್ತುಗಳು ಆತನ ಅಂತಃಪುರದಲ್ಲಿರುವುವು. ಮಂಚದ ಬಳಿಯಲ್ಲಿ ಒಂದೊಂದು ಕಡೆ ಒಬ್ಬೊಬ್ಬ ಸೇವಕನಂತೆ ಇಬ್ಬರು ಸೇವಕರು ನಿಂತು ದೊಡ್ಡ ದೊಡ್ಡ ಲಾವಂಚದ ಬೀಸಣಿಗೆಗಳಿಂದ ಬೀಸುತ್ತಿರುವರು]

**ಸಾರ್ವಭೌಮ**:—ಎಷ್ಟು ಬೀಸಿದರೂ ಪ್ರಯೋಜನವಿಲ್ಲ. ನನ್ನ ತಾಪವು ಅಡಗುವಂತಿಲ್ಲ. ಸಾಕು ಸಾಕು, ಹೊರಡಿ. (ಸೇವಕರು ಹೋಗುತ್ತಿರುವಲ್ಲಿ) ಇಮ್ಮಡಿ ಭೈರರಸರನ್ನು ಕರೆತಂದರೇನೋ ನೋಡಿ.

**ಪ್ರತೀಹಾರಿ**:—(ಬಂದು) ಮಹಾಪ್ರಧಾನರು ದಯಮಾಡಿಸಿದ್ದಾರೆ.

**ಸಾರ್ವ**:—ಬರಲಿ.

**ಪ್ರತೀ**:—ಅಪ್ಪಣೆ. (ಹೋಗುವನು)

**ಅಪ್ಪಾಜಿ**:—(ರಾಮಲಿಂಗಯ್ಯನೊಡನೆ ಪ್ರವೇಶಿಸಿ, ಸಾರ್ವಭೌಮನ ಸಂಜ್ಞೆಯಂತೆ ಆತನನ್ನೊಂದು ಭದ್ರಾಸನದಲ್ಲಿ ಕುಳ್ಳಿರಿಸಿ, ತಾನು ಮತ್ತೊಂದರಲ್ಲಿ ಕುಳಿತು) ದೇಹಸ್ಥಿತಿ ಹೇಗಿದೆ?

**ಸಾರ್ವ:**—ಇದ್ದಂತೆಯೇ ಇದೆ. . ಅಪ್ಪಾಜಿ, ಹೀಗೇಕೆ ಚಿಂತಾಕ್ರಾಂತರಾಗಿರುವಿರಿ? ಕಾರಣವೇನು?

**ಅಪ್ಪಾಜಿ:**—ಪರಿಸ್ಥಿತಿಯು ಭಯಂಕರವಾಗಿದೆ. ಉಮ್ಮತ್ತೂರಿನ ಗಂಗರಾಜರು ಸಾಮಂತರಾಗಿರದೆ, ಸ್ವತಂತ್ರರಾಗಿದ್ದಾರೆ, ಸ್ಥಿರರಾಜ್ಯವನ್ನು ಸ್ಥಾಪಿಸಿದ್ದಾರೆ.

**ಸಾರ್ವ:**—(ಕ್ಷುಬ್ಧನಾಗಿ ಎದ್ದು ಕುಳಿತು) ಏನು? ನಾವು ಎಡಗಾಲ ಬೆರಳಿನಲ್ಲಿ ಮೆಟ್ಟಿ ತುಳಿತಿದ್ದ ಆ ಕೀಟಕ್ಕೆ ಇಷ್ಟು ಪ್ರತಾಪವೆ?

**ಅಪ್ಪಾಜಿ:**—ಗಂಗರಾಜರ ಸೇವೆಯಿಂದ ಸುಪ್ರೀತರಾಗಿ ದೊಡ್ಡರಾಯರು ಅವರಿಗೆ ಚಿಕ್ಕರಾಯಪಟ್ಟವನ್ನು ಅನುಗ್ರಹಿಸಿದ್ದರು. ಪೆನುಗೊಂಡ ಚಕ್ರೇಶ್ವರರೆಂದು ಕರೆದು ಗೌರವಿಸಿದ್ದರು. ಗಂಗರಾಜರು ತಾವು ಸ್ವತಂತ್ರರೆಂದು ಅದಕ್ಕೆ ಅರ್ಥ ಮಾಡಿ, ಪೆನುಗೊಂಡೆಯನ್ನು ಹಿಡಿದು, ಅದು ತಮ್ಮದೆಂದು ಸೂಚಿಸಿ ಪತ್ರ ಬರೆದಿದ್ದಾರೆ.

**ಸಾರ್ವ:**—ಆ ನಾಯಿಗೆ ಎಷ್ಟು ಉಚ್ಛೃಂಖಲ ಪ್ರವೃತ್ತಿ! ಇರಲಿ, ನಾನು ಸೊಕ್ಕನ್ನಡಗಿಸುವೆನು.

**ರಾಮ:**—(ಸ್ವಗತ) ವಿಜಯನಗರದ ಚಕ್ರೇಶ್ವರರಾದ ಇವರಿಂದ ಕೀಟ, ನಾಯಿ ಮುಂತಾದ ಮಾತುಗಳೆ? ಹೀಗೆ ಸಣ್ಣ ಮಾತುಗಳನ್ನಾಡುವುದೇ ಇವರ ಸ್ವಭಾವವಾಗಿ ಹೋಗಿದೆ. ಇವರು ಸಿಂಹಾಸನಕ್ಕೇ ಅನರ್ಹರು.
(ಕೃಷ್ಣದೇವರಾಯನು ಪ್ರವೇಶಿಸಿ ಮಂಚದ ಬಳಿಯ ಭದ್ರಾಸನದಲ್ಲಿ ಕುಳಿತುಕೊಳ್ಳುವನು)

**ಅಪ್ಪಾಜಿ:**—ಅಷ್ಟೇ ಅಲ್ಲ. ಉತ್ತರದಲ್ಲಿ ಶಿವನ ಸಮುದ್ರದಲ್ಲಿ ದಂಗೆಯಾಗಿದೆ. ಪಶ್ಚಿಮದಲ್ಲಿ ಗೋವೆಯಲ್ಲಿ ಯುದ್ಧವಾಗಿ, ಅದು ಮುಸಲ್ಮಾನರ ವಶವಾಗಿದೆ. ಪೂರ್ವದಲ್ಲಿ ಗಜಪತಿ ಪ್ರತಾಪರುದ್ರರು ಕೊಂಡವೀಡನ್ನೂ, ಉದಯಗಿರಿಯನ್ನೂ ಸ್ವಾಧೀನಪಡಿಸಿಕೊಂಡಿದ್ದಾರೆ. ಸಾಮಂತರಾಗಿದ್ದವರು ಸ್ವತಂತ್ರರಾಗಿದ್ದಾರೆ. ಕೃಷ್ಣಾನದಿಯ ಉತ್ತರಕ್ಕಂತೂ ಸದಾ ಯುದ್ಧವೇ. ಇದರ ಮೇಲೆ ದಂಗೆಯ ಕಿಚ್ಚಂತೂ ಹಲವೆಡೆಗಳಿಗೆ ಹರಡಿದೆ. ಉಳಿದೆಡೆಗಳಿಗೆ ಹರಡುವಂತಿದೆ.

**ಸಾರ್ವ:**—ನೀವುಗಳೆಲ್ಲ ಗಾಳಿ ಬೀಸಿ ಜ್ವಾಲೆಯನ್ನೆಬ್ಬಿಸಿ. ಅಪ್ಪಾಜಿ,

ಪರಿಹಾರ ಮಾರ್ಗಗಳನ್ನು ಸೂಚಿಸದೆ ದಂಗೆಗಳು ಹರಡುತ್ತಿವೆಯೆನ್ನುವುದೇ ಮಹಾಪ್ರಧಾನರ ಕೆಲಸವೆ?

ಅಪ್ಪಾಜಿ:—ಯುದ್ಧಗಳಿಂದಲೂ ಭಯಪ್ರದರ್ಶನದಿಂದಲೂ ಸಾಮಂತ ರಾಜರುಗಳನ್ನು ಅಡಗಿಸಿಟ್ಟಬಹುದು. ಅವರ ಹೃದಯವನ್ನು ಒಲಿಸಿಕೊಳ್ಳುವುದು ಮಾತ್ರ ಅವುಗಳಿಂದ ಸಾಧ್ಯವಿಲ್ಲ. ಸನ್ನಿವೇಶವು ಭಯಂಕರವಾಗಿದೆ. ನಾನೂ ರಾಮಲಿಂಗಯ್ಯನೂ ಪದೇ ಪದೇ ಅರಿಕೆ ಮಾಡಿರುವಂತೆ ಇಮ್ಮಡಿ ಭೈರರಸ ಒಡೆಯರನ್ನು ಸೆರೆಮನೆಯಿಂದ ಬಿಡುಗಡೆ ಮಾಡಿ, ಊರಿಗೆ ಕಳುಹಿಸಿದರೆ ಅನುಕೂಲ. ಬಸವರಸ ಒಡೆಯರೇ ಮುಂತಾದ ಅವರ ಬಂಧುಗಳೂ ಅವರ ಮಿತ್ರರೂ ನಮಗೆ ಆಪ್ತರಾಗುತ್ತಾರೆ. ಅವರೆಲ್ಲರೂ ಪ್ರಬಲರು. ಶಾಂತಿಸ್ಥಾಪನೆಗೂ ಶತ್ರುನಿಗ್ರಹಕ್ಕೂ ಅವರಿಂದ ಸಹಾಯವಾಗುತ್ತದೆ.

ಸಾರ್ವ:—ಆ ಪುಂಡ ಭೈರರಸ ಒಡೆಯನಲ್ಲಿ ದಯೆಯೆ? ಆಗದು. ಶಿರಚ್ಛೇದನವೇ ಅವನ ಪುಂಡಾಟಕ್ಕೆ ಉಡುಗೊರೆ.

ರಾಮ:—ನನ್ನ ಮಾತನ್ನು ಲಾಲಿಸಬೇಕು.

ಅಪ್ಪಾಜಿ:—ಭೈರರಸ ಒಡೆಯರನ್ನು ನಮ್ಮ ಆತ್ಮ ರಕ್ಷಣೆಗಾಗಿ ಉಳಿಸಿರಬೇಕು. ಆತನು ನಮ್ಮಲ್ಲಿದ್ದರೆ ಒಂದು ಹುಲಿ ಇದ್ದಹಾಗೆ. ಶತ್ರು ಭಯಂಕರನಾಗಿರುವನು. ಇದುವರೆಗೂ ಯುದ್ಧ ಮಾಡಿ ಯಶಸ್ಸಿನ ರಾಶಿಯನ್ನು ಗಳಿಸಿ ಈಗೇಕೆ ಕಳಂಕವನ್ನು ತಂದುಕೊಳ್ಳಬೇಕು?

ಸಾರ್ವ:—ಸಿಂಹಗಳನ್ನೇ ಹಿಡಿದು ಆಡಿಸುವವರಿಗೆ ಈ ಬಡ ನರಿಯದೊಂದು ಲೆಕ್ಕವೇ? ಪ್ರಭುವು ಹೇಳಿದಂತೆ ಕೇಳುವುದು ಪ್ರಧಾನರ ಕೆಲಸ.

ಕೃಷ್ಣ:—ಅಣ್ಣಯ್ಯ, ಅಪ್ಪಾಜಿಯವರು ನಮ್ಮಿಬ್ಬರಿಗೂ ಪೂಜ್ಯರು. ಧರ್ಮಾತ್ಮರಾದ ಪ್ರಧಾನಸಚಿವರು. ಅವರಲ್ಲಿ ಬಿರುನುಡಿಗಳೆ?

ಸಾರ್ವ:—(ಹುಬ್ಬು ಗಂಟಿಕ್ಕಿ) ಇರಲಿ, ನಾನು ಬಲ್ಲೆ. ತಂದೆಯವರು ಮೃತರಾದಾಗಿನಿಂದ ದಂಗೆಗಳನ್ನಡಗಿಸಿ ಯುದ್ಧ ಮಾಡುವುದರಲ್ಲೇ ಕಾಲವೆಲ್ಲ ಕಳೆದುಹೋಯಿತು. ಒಂದು ಕಡೆಯಿಂದ ದಂಗೆಗಳನ್ನಡಗಿಸಿದರೆ ಮತ್ತೊಂದು ಕಡೆಯಿಂದ ದಂಗೆಗಳು. ಎಲ್ಲಿ ನೋಡಿದರೂ ದಂಗೆ, ದಂಗೆ, ದಂಗೆ.

ರಾಮು:—(ಜನಾಂತಿಕವಾಗಿ) ಅಣ್ಣತಮ್ಮಂದಿರಲ್ಲಿ ಎಷ್ಟು ವ್ಯತ್ಯಾಸ? (ನಿರ್ಜನ ಪ್ರದೇಶದಲ್ಲಿದ್ದಂತೆ ಭಾವಿಸಿ ನಗುವನು.)

ಸಾರ್ವ:—(ಅವನ ಮುಖವನ್ನು ದುರುದುರನೆ ನೋಡಿ) ಈ ನಗುವೇನು? ಅದೇನು ಪಿಟಿ ಪಿಟಿ ಮಂತ್ರ? ನೀನು ಹೇಳಿಕೊಂಡುದೇನು, ಹೇಳು.

ರಾಮು:—ಹೆಚ್ಚೇನೂ ಇಲ್ಲ. 'ಅಣ್ಣತಮ್ಮಂದಿರಲ್ಲಿ ಎಷ್ಟು ವ್ಯತ್ಯಾಸ' ಎಂದುಕೊಂಡೆ.

ಸಾರ್ವ:—ಅಷ್ಟೆ. ಅಷ್ಟೆ. ತಿರುಕರಿಗೆ ಸುಖಭೋಜನಕ್ಕೆ ಅವಕಾಶವಾದರೆ ಅಷ್ಟೆ, ತಲೆ ತಿರುಗುವುದೇ ಹೀಗೆ! ಅಪ್ಪಾಜಿ, ನೀವು ಬೀದಿಹೋಕನನ್ನು ದೊಡ್ಡ ಪದವಿಗೆ ತಂದುದರ ಫಲ. ಅವನಿಗೆ ತಲೆ ತಿರುಗಿತು.

ಪ್ರತೀಹಾರಿ:—(ಪ್ರವೇಶಿಸಿ) ಅಪ್ಪಣೆಯಂತೆ ಕಾವಲುಗಾರರು ಭೈರರಸ ಒಡೆಯರನ್ನು ಕರೆದುಕೊಂಡು ಬಂದಿದ್ದಾರೆ.

ಸಾರ್ವ:—ಬರಲಿ.

ಪ್ರತಿ:—(ಹೋಗುವನು.— ಭೈರರಸನೂ ಸೆರೆಮನೆಯ ಕಾವಲುಗಾರರೂ ಪ್ರವೇಶಿಸುವರು.)

ಸಾರ್ವ:—ಭೈರರಸ, ನೀನು ದಂಗೆಯೆದ್ದವರಿಗೆ ಸಹಾಯ ಮಾಡಿರುವೆ. ನೀನು ರಾಜದ್ರೋಹಿ.

ಭೈರರಸ:—ನಿಜಸ್ಥಿತಿಯನ್ನು ವಿಚಾರಿಸಬೇಕು, ಜೀಯಾ! ನಾನು ರಾಜಭಕ್ತ. ನಾನು ತಮ್ಮ ಸಹಾಯಕ್ಕೆಂದೇ ಸೈನ್ಯವನ್ನು ತರುತ್ತಿದ್ದೆ. ನನ್ನ ವಿರೋಧಿಗಳ ಮಾತನ್ನು ಕೇಳಿ ತಮ್ಮ ಕಡೆಯವರು ನಾನು ದಂಗೆಯೇಳುತ್ತಿದ್ದೆನೆಂದು ನಂಬಿ ನನ್ನನ್ನು ಸೆರೆಹಿಡಿದಿದ್ದಾರೆ.

ಸಾರ್ವ:—ಹುಂ! ಸಾಕು! ರಾಜದ್ರೋಹಿಗಳ ಮಾತನ್ನು ಕೇಳಿ ನಮ್ಮ ಕಡೆಯವರನ್ನು ದಂಡಿಸಬೇಕೇನು? ಸುಳ್ಳು ಮಾತುಗಳನ್ನು ನಂಬಬೇಕೇನು?

ಭೈರರಸ:—ಕಲ್ಲುಗಾಣದಲ್ಲಿ ಅರೆಯಿಸಿಕೊಳ್ಳುವ, ಸಿಡಿತಲೆ ಕೊಡುವ ಶಿಕ್ಷೆಯು ತಪ್ಪುವದಾದರೂ ನಾನು ಸುಳ್ಳು ಹೇಳತಕ್ಕವನಲ್ಲ. ನಾನು ಎಂದೂ ಸುಳ್ಳು ಹೇಳಿಲ್ಲ. ನಾನೂ ಪ್ರಭು. ಪ್ರಭುವಾದ ನಾನೇ ಸುಳ್ಳು ಹೇಳಿದ ಮೇಲೆ, ನನ್ನ ಪ್ರಜೆಗಳು ಸತ್ಯವಂತರಾಗಿರಬೇಕೆಂದು ಕೋರಲು

ನನಗೆ ಅಧಿಕಾರವೆಲ್ಲಿಯದು ? ನನ್ನ ರಾಜ್ಯವು ಚಿಕ್ಕದು. ನನ್ನ ಪ್ರಜೆಗಳೂ ಬಹು ಸ್ವಲ್ಪ ಮಂದಿ. ಆದರೂ ನನ್ನ ಪ್ರಜೆಗಳಿಗಿರುವಷ್ಟು ಸೌಖ್ಯವು ತಮ್ಮ ವಿಶಾಲ ಚಕ್ರಾಧಿಪತ್ಯದ ಪ್ರಜೆಗಳಿಗಿಲ್ಲ.

**ಸಾರ್ವ:**—ಇದು ರಾಜದ್ರೋಹದ ಮಾತಲ್ಲದೆ ಮತ್ತೇನು ?

**ಭೈರರಸ:**—ಮೊದಲು ರಾಜತ್ವ ಸಿದ್ಧಿಸಿದರಲ್ಲವೇ ರಾಜದ್ರೋಹದ ಮಾತು ? ಸಿಂಹಾಸನಕ್ಕೆ ಅಧಿಕಾರಿಯಾಗಿದ್ದ ರಾಜಕುಮಾರನನ್ನು ಕೊಂದು ರಾಜ್ಯವನ್ನಪಹರಿಸಿದ ತಾವು ರಾಜದ್ರೋಹಿಗಳೋ, ಅಥವಾ ನಾನು ರಾಜ ದ್ರೋಹಿಯೋ ತಿಳಿಯದು. ನಾನು ನಿರಪರಾಧಿ. ಆದರೆ ನಂಬದವರಿಗೆ ನಿಜ ವನ್ನು ಹೇಳಿ ಫಲವೇನು ? ಹೇಗೂ ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿ ದ್ದೇನೆ. ಈಶ್ವರನೊಬ್ಬನಿರುವುದು ನಿಜವಾದರೆ, ನನಗೆ ಸದ್ಗತಿ ದೊರೆತೇ ದೊರೆಯುವುದು.

**ಸಾರ್ವ:**—ಅಪ್ಪಾಜಿ, ಈ ದಿನ ರಾತ್ರಿ ನೀವು ಇವನ ತಲೆಯನ್ನು ಕಡಿಸಿ ಹಾಕಬೇಕು. ಎಲವೊ ! ರಾಮಲಿಂಗ ! ರಾಜದ್ರೋಹಿಗಳಿಗೆ ಒದಗುವ ಗತಿಯನ್ನು ನೋಡಿದಿಯಾ ?

**ಕೃಷ್ಣ:**—ಅಪರಾಧವೇನೆಂಬುದನ್ನು ವಿಚಾರಿಸದೆಯೇ, ಅಪರಾಧ ವಿಮರ್ಶೆಯಿಲ್ಲದೆಯೇ ಶಿಕ್ಷೆಯೆ ? ನಿರಪರಾಧಿಯ ಕೊಲೆಯೆ ? ಕೃಪೆ ತೋರ ಬೇಕು. ಅಪರಾಧ ನಡೆದಿದೆಯೋ ಇಲ್ಲವೋ ಎಂಬುದನ್ನು ವಿಮರ್ಶಿಸಬೇಕು.

**ಸಾರ್ವ:**—ಅಪ್ಪಾಜಿ, ಈ ಧೂರ್ತನೂ ಸಂಜೆಯ ವರೆಗೂ ಸೆರೆಯಲ್ಲಿ ರಲಿ. ಪ್ರಭುವಿನ ಅಪ್ಪಣೆಯನ್ನು ನೆರವೇರಿಸುವುದೇ ಪ್ರಧಾನರ ಕೆಲಸ. ಇಂದು ರಾತ್ರಿ ನೀನೇ ನಿಂತು ಇವನ ಕಣ್ಣುಗುಡ್ಡೆಗಳನ್ನು ಕೀಳಿಸಿ ನನಗೆ ನಾಳೆ ಬೆಳಗಾಗುವ ವೇಳೆಗೆ ಅವೆರಡನ್ನೂ ತಂದು ತೋರಿಸಬೇಕು. (ರಾಜಮುದ್ರಿಕೆ ಯನ್ನು ಕೊಟ್ಟು) ಇದೋ ರಾಜಮುದ್ರಿಕೆ ! ಕಾಲ ಕೆಟ್ಟು ಹಾಳಾಯಿತು !

**ರಾಮ:**—(ನಕ್ಕು) ಅದು ನಿಜವಾದ ಮಾತು. ಬ್ರಹ್ಮನೂ ಸ್ವಲ್ಪ ಕಾಲ ಸೃಷ್ಟಿ ಮಾಡಿ ಪರೀಕ್ಷಿಸಿ ನೋಡಿದನಂತೆ. ಈಗೇನೊ ತನ್ನ ಸೃಷ್ಟಿ ಯನ್ನು ನೋಡಿ ತಾನೆ ನಾಚಿ, ಬೇಸತ್ತು, ಮುಂದೆ ಬೇರೆ ವಿಧದಲ್ಲಿ ಸೃಷ್ಟಿ ಮಾಡಬೇಕೆಂದಿದ್ದಾನಂತೆ.

ಸಾರ್ವ:—ಹೂಂ! ಸಾಕು. ಪ್ರತಾಪಿಯಾದ ನನ್ನೆದುರಿಗೆ ನಿಂತು ವಾದಿಸಿದವರಿಲ್ಲ.

ರಾಮು:—(ನಕ್ಕು) ನಮ್ಮಂಥವರು ನಿಮ್ಮೆದುರಿಗೆ ಹಿಂದೆ ಒಂದೂ ಇರಲಿಲ್ಲ.

ಸಾರ್ವ:—ನೀನೂ ರಾಜದ್ರೋಹಿ!

ರಾಮು:—(ಒಂದು ಕ್ಷಣ ನಿಧಾನಿಸಿ ಹುಸಿನಗೆಯಿಂದ) ಅದು ನನಗೂ ಗೊತ್ತು. ತನ್ನ ಮರಿಯನ್ನೇ ತಿಂದ ಹುಲಿ ಕುರಿಮರಿಯನ್ನು ಬಿಟ್ಟೀತೆ? ತಮ್ಮನ ಕಣ್ಣನ್ನು ಕೀಳಿಸುವವರು ನನ್ನನ್ನು ಬಿಟ್ಟೀರಾ?

ಸಾರ್ವ:—ನಿನ್ನ ಆಯುಸ್ಸು ಸಂಧ್ಯಾಕಾಲದ ವರೆಗೆ ಮಾತ್ರ.

ರಾಮು:—ಬ್ರಹ್ಮ ತಮಗೇ ಸಂಪೂರ್ಣಾಧಿಕಾರವನ್ನು ವಹಿಸಿರಬೇಕು. ಆತನ ಕೈಯೊಳಗಿನ ಕಂಠ ತಮ್ಮಲ್ಲಿಗೇ ಬಂದಿರಬೇಕು.

ಸಾರ್ವ:—ಅಪ್ಪಾಜಿ, ಈ ನೀಚನಿಗೂ ಇಂದು ಸಂಧ್ಯಾಕಾಲ ತಲೆಯನ್ನು ಕಡಿಸಿ ಹಾಕಿ. ಅಥವಾ ಅದು ಬೇಡ. ಇಂತಹ ಧೂರ್ತರಿಗೆ ಮರಣ ದಂಡನೆ ತಕ್ಕ ಶಿಕ್ಷೆಯಲ್ಲ. ಯಾವಜ್ಜೀವವೂ ಚಿತ್ರಹಿಂಸೆಯಿಂದ ಸೆರೆಮನೆಯಲ್ಲಿ ಕೊಳೆಯುತ್ತಿರಲಿ. ಅದೇ ಅವನಿಗೆ ತಕ್ಕ ಶಿಕ್ಷೆ.

ಅಪ್ಪಾಜಿ:—(ನಿಟ್ಟುಸಿರು ಬಿಟ್ಟು) (ಸ್ವಗತ) ಈ ಹುಚ್ಚು ದೊರೆಯ ಹುಚ್ಚು ಆಜ್ಞೆಗೆ ಎದುರೇ ಇಲ್ಲ.

(ತೆರೆ ಬೀಳುವುದು)

—

## ದೃಶ್ಯ ೫

(ಸೆರೆಮನೆಯ ಸಮೀಪದ ಮಾರ್ಗ. ಅಪ್ಪಾಜಿಯು ಜಕ್ಕಣ್ಣನೆಂಬ ಸೇವಕನೊಡನೆ ಪ್ರವೇಶಿಸುವನು.)

ಅಪ್ಪಾಜಿ:—ಜಕ್ಕಣ್ಣ, ನಾನು ಹೇಳಿದಂತೆ ಕಾವಲಿನವರು ಆಯುಧಪಾಣಿಗಳಾಗಿ ದೂರದಲ್ಲಿ ಸುತ್ತಲೂ ನಿಂತಿದ್ದಾರೊ? ಇತರ ಸಿದ್ಧತೆಗಳೆಲ್ಲಾ ನಾನು ಹೇಳಿದಂತೆ ನಡೆದಿವೆಯೋ? ಇಲ್ಲಿಗೆ ಒಬ್ಬರನ್ನೂ ಬಿಡಕೂಡದೆಂದು ತಿಳಿಸಿರುವೆಯಾ?

**ಜಕ್ಕಣ್ಣ:**—ಅಪ್ಪಣೆಯಾದಂತೆ ಎಲ್ಲಾ ನಡೆದಿದೆ ಮಹಾಸ್ವಾಮಿ!.... ಮಹಾಸ್ವಾಮಿ ! ಮಹಾಸ್ವಾಮಿ ! (ಬಿಕ್ಕಿ ಬಿಕ್ಕಿ ಅಳುವನು)

ಅಪ್ಪಾಜಿ:—ಏನು ಜಕ್ಕಣ್ಣಾ ? ಹೇಳು, ಹೇಳು.

**ಜಕ್ಕಣ್ಣ:**—ಅದೇ ನನ್ನೊಡೆಯಾ ! ಚಿಕ್ಕರಾಯರಿಗೆ ಕಣ್ಣು ಕೀಳಿಸಬೇಕೆಂದು ಅಪ್ಪಣೆಯಾಗಿರೋ ವಿಚಾರ. ನನ್ನ ಕಣ್ಣು ಕೀಳಿಸಿ. ಅವರ ಕಣ್ಣು ಉಳಿಸಿ ನನ್ನೊಡೆಯ. ನನ್ನ ಕಣ್ಣು ಹೋದರೆ, ನನ್ನ ಹೆಂಡರು ಮಕ್ಕಳು ಕೆಡ್ತಾರೆ. ಚಿಕ್ಕರಾಯರ ಕಣ್ಣು ಹೋದರೆ ರಾಜ್ಯವೇ ಮುಳಗಿ ಹೋಗ್ತದೆ. ಅವರ ಉಪ್ಪು ತಿಂದು ಅವರ ಸೇವೆ ಮಾಡಿದ್ದೇನೆ. ನನ್ನ ಕಣ್ಣು ಕೀಳಿಸಿ ಅವರ ಕಣ್ಣುಳಿಸಿ.

ಅಪ್ಪಾಜಿ:—(ಆತ್ಮಗತ) ಇಂಥವರೂ ಇದ್ದಾರಲ್ಲ ! (ಪ್ರಕಾಶ) ಜಕ್ಕಣ್ಣಾ, ಈ ರಾಜಮುದ್ರಿಕೆಯನ್ನು ತೆಗೆದುಕೊ (ಕೊಟ್ಟು) ಭೈರರಸ ಒಡೆಯರನ್ನು ಕರೆದುಕೊಂಡು ಬಾ. ಉಳಿದವರಿಬ್ಬರನ್ನೂ ಆಮೇಲೆ ಕರೆತರಬೇಕಾಗುವುದು. ಸೆರೆಮನೆಯ ಕಾವಲುಗಾರರೂ ಇಲ್ಲಿಗೆ ಬರಕೂಡದು, (ಜಕ್ಕಣ್ಣ ಹೋಗಿ ಭೈರರಸನೊಡನೆ ಬರುವನು)

**ಭೈರರಸ:**—ಸರಿ. ತಾವು ಸಮೀಪಿಸಿತು. ನಡೆಯಲಿ.

**ಅಪ್ಪಾಜಿ:**—ಹಾಗಾದರೆ ಸಾಮ್ರಾಜ್ಯವು ಹಾಳಾಗಬೇಕೆಂದೋ ತಮ್ಮ ಅಭಿಲಾಷೆ ?

**ಭೈರರಸ:**—ಹಾಗೆಂದರೆ ? ಅರ್ಥವಾಗಲಿಲ್ಲ.

**ಅಪ್ಪಾಜಿ:**—ತಮ್ಮಂಥ ವೀರರನ್ನೂ ಪ್ರಭುಧರ್ಮನಿರತ ಸಾಮಂತರನ್ನೂ ಕಳೆದುಕೊಳ್ಳುವುದಾದರೆ ಸಾಮ್ರಾಜ್ಯವು ಮರುಭೂಮಿಯಂತಾಗುವುದು. (ಎದುರು ಪಾರ್ಶ್ವಕ್ಕೆ ಕೈತೋರಿ) ಅದೋ, ಅಲ್ಲಿ ನನ್ನ ಆಪ್ತ ಸೇವಕನು ನಿಂತಿದ್ದಾನೆ. ಅವನೊಡನೆ ತಾವು ದಯಮಾಡಬೇಕು. ಈ ವಿಷಯವು ಸಾರ್ವಭೌಮರಿಗೆ ತಿಳಿದರೆ, ನನ್ನ ತಲೆಯು ನೆಲಕ್ಕುರುಳುವುದು. ತಾವು ನನಗಾಗಿ ಅಜ್ಞಾತವಾಸ ಮಾಡಬೇಕು. ತಮ್ಮವರ ಯೋಚನೆಯೇನೂ ತಮಗೆ ಅಗತ್ಯವಿಲ್ಲ. ಅವರು ಸುರಕ್ಷಿತವಾಗಿರುವಂತೆ ನೋಡಿಕೊಳ್ಳುವ ಭಾರ ನನ್ನದು. ಬಂಧುಜನರನ್ನಗಲಿರಬೇಕೆಂಬ ಖಿನ್ನಹಕ್ಕಾಗಿ ನನ್ನನ್ನು ಮನ್ನಿಸುವ ಭಾರ ತಮ್ಮದು. ಅಜ್ಞಾತವಾಸ ಕಾಲದಲ್ಲಿ ತಮಗೆ ಅವಶ್ಯ

ವಾಗಬಹುದಾದಷ್ಟು ವರಹಗಳು ತನ್ನೊಡನೆ ಬರುವಂತೆ ಆಜ್ಞಾಪಿಸಿದ್ದೇನೆ. ಜಕ್ಕಣ್ಣಾ, ರಾಮುಲಿಂಗಯ್ಯನವರನ್ನು ಕರೆದುಕೊಂಡು ಬಾ. ( ಜಕ್ಕಣ್ಣನು ಹೋಗುವನು )

ಭೈರರಸ:--ಪ್ರಜೆಗಳಿಗೆ ತಂದೆಯಂತಿದ್ದೀರಿ. ತಮ್ಮಲ್ಲಿ ಹೇಗೆ ಕೃತಜ್ಞತೆಯನ್ನು ತೋರಿಸಬೇಕೋ ತಿಳಿಯದು. ರಾಯರು ಸೆರೆಗೆ ಹಾಕಿಸಿದರು. ತಾವು ಬಿಡಿಸಿದಿರಿ. ನಾನು ಸಾವಿಗೆ ಸಿದ್ಧವಾಗಿಯೇ ಬಂದಿದ್ದೆ. ತಮ್ಮ ಸೌಜನ್ಯದಿಂದ ಪ್ರಾಣದಾನವಾಯಿತು. ಇದರಿಂದ ತಮಗೆ ಅಪಾಯ ಒದಗಿದರೆ. . . . ?

ಅಪ್ಪಾಜಿ:—(ನಗುತ್ತ) ಅಪಾಯವೇನೂ ಒದಗದು. ನಿರಾತಂಕವಾಗಿ ದಯಮಾಡಿ. ಕಾಲಹರಣಕ್ಕೆ ಮಾತ್ರ ಅವಕಾಶವಿಲ್ಲ.

ಭೈರರಸ:—(ನಮಸ್ಕರಿಸಿ) ನಾನು ತಮ್ಮವನು. ತಮ್ಮಿಂದ ಉಳಿದ ಈ ದೇಹ ತಮ್ಮ ಸೇವೆಗೆ ಮೀಸಲು. ನಾನು ಬದುಕಿರುವವರೆಗೂ ತಮ್ಮ ಭಕ್ತ.

ಅಪ್ಪಾಜಿ:—ನನ್ನ ಭಕ್ತರಾಗಬೇಡಿ. ವಿರೂಪಾಕ್ಷನ ಭಕ್ತರಾಗಿ; ಕರ್ಣಾಟಕ ಸಾಮ್ರಾಜ್ಯ ಭಕ್ತರಾಗಿ. ಹೋಗಿ ಬನ್ನಿ. ಕೃಷ್ಣಪಕ್ಷವೇ ಶಾಶ್ವತವಲ್ಲ. ಮುಂದೆ ಶುಕ್ಲಪಕ್ಷವೂ ಬರುತ್ತದೆ.

ಭೈರರಸ:—ಕತ್ತಿಯನ್ನು ಹಿರಿದು ಕಾಳಗ ಮಾಡಿ ಸಾಯಬೇಕೆಂದು ಕೈ ಕುಣಿಯುತ್ತಿದ್ದಿತು. ನಾನು ಕೈಮುಗಿದು ನಿಲ್ಲುವಂತೆ ಮಾಡಿದಿರಿ. ತಮ್ಮ ಸೇವೆಗೇ ಮೀಸಲಾಗಿರುವಂತೆ, ದೇಹವನ್ನುಳಿಸಿ, ಆಶೆಯನ್ನುಂಟುಮಾಡಿದಿರಿ. (ನಮಸ್ಕರಿಸಿ ಹೋಗುವನು. ಜಕ್ಕಣ್ಣನು ರಾಮುಲಿಂಗಯ್ಯನೊಡನೆ ಪ್ರವೇಶಿಸುವನು)

ಅಪ್ಪಾಜಿ:—ರಾಮುಲಿಂಗಯ್ಯ, ನೀನೊಂದು ರತ್ನ.

ರಾಮು:—ಹೌದು ಅಪ್ಪಾಜಿ, ಚಕ್ರವರ್ತಿಗಳೂ ಕೂಡ ಅದನ್ನು ಒಪ್ಪಿಕೊಂಡಿದ್ದಾರೆ.

ಅಪ್ಪಾಜಿ:—ಹಾಗೆಂದರೆ ?. . . . ಅವರೆಲ್ಲಿ ಒಪ್ಪಿಕೊಂಡರು ?

ರಾಮು:—(ನಕ್ಕು) ರತ್ನದಂತೆ ಭದ್ರವಾಗಿಟ್ಟು ಕಾವಲಿಡಿಸಿದ್ದಾರೆ. ಒಪ್ಪಿಕೊಂಡಂತೆಯೇ ತಾನೆ ? ರತ್ನವನ್ನು ಬೀದಿಯಲ್ಲಿ ಬಿಟ್ಟಿರುವುದುಂಟೆ ? ಅದಕ್ಕೇ ರತ್ನ ಭದ್ರವಾಗಿದೆ. ಸೆರೆಮನೆಯಲ್ಲಿ ಭದ್ರವಾಗಿಡಿಸಿದ್ದಾರೆ. ನಾನು ರತ್ನವಲ್ಲವೆ ?

ಅಪ್ಪಾಜಿ:—(ನಿಟ್ಟುಸಿರುಬಿಟ್ಟು) ಆದಷ್ಟು ಬೇಗ ನಿನ್ನನ್ನು ಸೆರೆಮನೆ ಯಿಂದ ಬಿಡಿಸುವೆನು. ಅದನ್ನು ತಿಳಿಸುವುದಕ್ಕೇ ನಿನ್ನನ್ನು ಒರಮಾಡಿದೆ. ಕಾಲವಿಳಂಬಕ್ಕಿನ್ನು ಅವಕಾಶವಿಲ್ಲ. ನಾವಿನ್ನು ಹೊರಡಬೇಕಾಗಿದೆ. ಜಕ್ಕಣ್ಣಾ, ನೀನು ಜಾಗರೂಕನಾಗಿರಬೇಕು. ಯೋಚಿಸಬೇಡ. ಕೃಷ್ಣ ದೇವರಾಯರು ನಮ್ಮ ಮನೆಯಲ್ಲಿ ಸುರಕ್ಷಿತವಾಗಿರುವರು. ಈ ವಿಷಯ ಗಳು ಯಾರಿಗೂ ತಿಳಿಯಕೂಡದು. ಸೆರೆಮನೆಗೆ ಯಾರನ್ನೂ ಬಿಡಕೂಡದು. ಎಚ್ಚರಿಕೆ !

ಜಕ್ಕಣ್ಣ:—(ದಂಡಪ್ರಣಾಮ ಮಾಡಿ) ನಾನು ಬದುಕಿದೆ. ಮಹಾಸ್ವಾಮಿ, ತಾವು ನಮ್ಮೆಲ್ಲರಿಗೂ ತಂದೆ.

[ ತೆರೆ ಬೀಳುವುದು ]

—

## ದೃಶ್ಯ ೬

[ಚಿನ್ನಾದೇವಿಯೂ ತಿರುಮಲದೇವಿಯೂ ಕಾರಾಗೃಹದ ಕಡೆಗೆ ಹೋಗುವ ಮಾರ್ಗದಲ್ಲಿ ಪ್ರವೇಶಿಸುವರು. ಚಿನ್ನಾದೇವಿಯು ವೀರಗೀತೆಯನ್ನು ಹಾಡುವಳು ]

ತಿರುಮಲದೇವಿ:—ಎಷ್ಟು ವೀರಾವೇಶದಿಂದ ವೀರಗೀತೆಯನ್ನು ಹಾಡಿ ದೆಯೇ ಚಿನ್ನಾ ! ರಣಕಹಳೆಯ ಧ್ವನಿಗಿಮ್ಮಡಿಯಾಗಿದೆ, ಅದರ ಪ್ರಭಾವ. ಅದನ್ನು ಕೇಳಿ ಶೌರ್ಯಪ್ರದರ್ಶನದ ಆಶೆಯುಂಟಾಗಿದೆ. ರಕ್ತದ ಆವೇಗವು ಹೆಚ್ಚಿ ಕಿವಿಗಳಿಗೆ ಬಿಸಿಯೇರಿದೆ.

ಚಿನ್ನಾದೇವಿ:—ನಾವು ಹೊರಟಿರುವ ಕೆಲಸವೂ ಅದಕ್ಕೆ ಸರಿಯಾಗಿದೆ. ಅಣ್ಣನು ತಮ್ಮನನ್ನು ಸೆರೆಯಲ್ಲಿಡಿಸಿ ಕಣ್ಣು ಕೀಳಿಸುವುದೆ ? ಅದೂ ನ್ಯಾಯ ವನ್ನೂ ಧರ್ಮವನ್ನೂ ಬೋಧಿಸಿದುದಕ್ಕಾಗಿ ! ಅಪ್ಪಾಜಿಯವರಾದರೂ ವಿವೇಕವನ್ನು ಬೋಧಿಸಬಹುದೆಂದಿದ್ದೆ. ಅವರೂ ಸುಮ್ಮನಾಗಿದ್ದಾರೆ.

ತಿರು:—ಆರ್ಯಪುತ್ರನನ್ನು ಬಿಡಿಸುವ ಪ್ರಯತ್ನದಲ್ಲಿ ನಮ್ಮ ದೇಹ ವನ್ನೇ ಈಡಾಡೋಣ. ನಮ್ಮ ತೌರೂರಾದ ಶ್ರೀರಂಗಪಟ್ಟಣದಲ್ಲಿದ್ದಾಗ ನಾನು ಬಾಲ್ಯದಲ್ಲಿ ಯುದ್ಧಕಲೆಯಲ್ಲಿ ಶಿಕ್ಷಣ ಪಡೆದಿದ್ದೆ. ಅದರ ಪರೀಕ್ಷೆಗೆ

ಈಗ ಸಮಯ ದೊರೆತಿದೆ. ಚಿನ್ನಾ, ಪತಿಯನ್ನು ಬಿಡಿಸಿಕೊಂಡು ಬರುವ ಪ್ರಯತ್ನದಲ್ಲಿ ಪ್ರಾಣಗಳೇ ಮೀಸಲು.

ಚಿನ್ನಾ:—ಸಾಮ್ರಾಜ್ಯದ ಸೇವೆಗಾಗಿ ಆವಶ್ಯಕವೆಂದು ಭಾವಿಸಿದರೆ, ವೃದ್ಧಾಪ್ಯವನ್ನೂ ಲಕ್ಷ್ಯಮಾಡದೆ ತನ್ನನ್ನೂ ಕೊಲ್ಲಬಹುದೆಂದು ಅಪ್ಪಾಜಿಯವರೂ ಹೇಳಿದ್ದರು. ನನ್ನ ಕತ್ತಿಯ ಪೆಟ್ಟಿನ ಸವಿಯನ್ನು ಅವರೂ ನೋಡಲಿ. (ಕತ್ತಿಯನ್ನು ಒರೆಯಿಂದ ಹಿರಿದು) ನನ್ನ ಕತ್ತಿಗೆ ಇಂದು ರಕ್ತದ ದಾಹ. ಶತ್ರುಗಳ ರಕ್ತ, ಇಲ್ಲವೇ ನನ್ನ ರಕ್ತ.

ತಿರು:—ಆಗಬಹುದು. ಆದರೆ ದುಡುಕಿ ವರ್ತಿಸುವುದು ಮಾತ್ರ, ಸರ್ವಥಾ ಕೂಡದು. ಅವಶ್ಯವಾದಲ್ಲಿ ರಕ್ತಪಾತ. ತಿಳಿಯಿತೆ, ಚಿನ್ನಾ ? ನಮ್ಮಿಂದಲೇ ಅನ್ಯಾಯವೇನಾದರೂ ನಡೆದೀತು. ನಡೆ, ಹೋಗೋಣ.

(ಹೋಗುವರು)

—

## ದೃಶ್ಯ ೭

[ಕಾರಾಗೃಹದ ದಾರಿ. ಜಕ್ಕಣ್ಣನು ಪ್ರವೇಶಿಸುವನು. ಎದುರು ಪಾರ್ಶ್ವದಿಂದ ಪುರುಷವೇಷಧಾರಿಗಳಾದ ಚಿನ್ನಾದೇವಿ ತಿರುಮಲದೇವಿಯರು ಪ್ರವೇಶಿಸುವರು.]

ಜಕ್ಕಣ್ಣ:—ಯಾರದು, ಈ ವೇಳೆಯಲ್ಲಿ ? (ಆ ಮಾತನ್ನು ಲಕ್ಷಿಸದೆ ಖಡ್ಗಧಾರಿಗಳಾಗಿ ಮುಂದೆ ಬರುತ್ತಿರಲು ಅದನ್ನು ಕಂಡು) ನಿಲ್ಲಬೇಕು. (ನಿಲ್ಲುವರು) ಯಾರಯ್ಯಾ ನೀವು ? ಹಿಂದಕ್ಕೆ ಹೊರಡಿ. ಮುಂದೆ ಹೋಗಲು ಅಪ್ಪಣೆಯಿಲ್ಲ. ಯಾರು ನೀವು ?

ಚಿನ್ನಾ:—ಯಾರಾದರೇನು ? ನೆಲೆ ತಪ್ಪಿದ ಪ್ರಾಣಿಗಳು.

ತಿರು:—ನಾವು ಮುಂದೆ ಹೋಗಲೇಬೇಕು.

ಜಕ್ಕಣ್ಣ:—(ಗುರುತು ಹಿಡಿದು) ಚಿನ್ನಾದೇವಿಯವರು ! ತಿರುಮಲದೇವಿಯವರು ! ಏನು ತಾಯಿ ! ಈ ವೇಷವನ್ನು ಧರಿಸಿ ಈವೇಳೆಯಲ್ಲಿ ಇಲ್ಲಿಗೆ ಬಂದಿದ್ದೀರಿ ?

ಚಿನ್ನಾ:—ನಮ್ಮ ಜಕ್ಕಣ್ಣಾ!....ಏನೂ ತಿಳಿಯದಂತೆ ಮಾತಾಡುತ್ತಿರುವೆ ಜಕ್ಕಣ್ಣಾ!

ಜಕ್ಕಣ್ಣ:—ಚಿಕ್ಕರಾಯರನ್ನು ಬಿಡಿಸಿಕೊಂಡು ಹೋಗಲು ಬಂದಿರಬೇಕು.

ತಿರು:—ಹೌದು. ಅದಕ್ಕೇ ಬಂದಿರುವುದು, ಜಕ್ಕಣ್ಣಾ. ನೀನು ಅವರ ಆಪ್ತಸೇವಕ. ಅವರ ಮೇಲಿನ ಭಕ್ತಿಯಿಂದಲಾದರೂ ನಮ್ಮನ್ನು ಬಿಡು.

ಜಕ್ಕಣ್ಣ:—ಅಪ್ಪಾಜಿಯವರ ಅಪ್ಪಣೆ. ಒಬ್ಬರನ್ನೂ ಬಿಡುವ ಹಾಗಿಲ್ಲ.

ಚಿನ್ನಾ:—ನಮ್ಮನ್ನೂ?

ಜಕ್ಕಣ್ಣ:—ಒಬ್ಬರನ್ನೂ ಬಿಡಕೂಡದೆಂದು ಅವರ ಅಪ್ಪಣೆ.

ತಿರು:—ವಿಪತ್ತು ಒದಗಿದರೆ ಹಾಸಿಗೆಯೇ ಹಾವಾಗುವುದು; ಆಪ್ತರೇ ಶತ್ರುಗಳಾಗುವರು. ಸ್ವಾಮಿಭಕ್ತಿಯಿಂದ ಬಿಡಲೊಲ್ಲೆಯಾದರೆ, ಹಣದ ಮೇಲಿನ ಆಶೆಯಿಂದಲಾದರೂ ಬಿಡು. ಅನರ್ಘ್ಯವಾದ ರತ್ನಗಳನ್ನೇ ಯಥೇಚ್ಛವಾಗಿ ಕೊಡುತ್ತೇವೆ.

ಚಿನ್ನಾ:—ಹಣದ ಆಶೆಯಿಂದಲೂ ಕೆಲಸವಾಗದಿದ್ದರೆ (ಕತ್ತಿಯನ್ನು ಒರೆಯಿಂದ ಹಿರಿದು ಝಳಪಿಸಿ) ತಲೆಗಳನ್ನು ಹಾರಿಸಿ ಕಾರ್ಯ ಸಾಧಿಸುತ್ತೇವೆ.

ಜಕ್ಕಣ್ಣ—ಸೆರೆಮನೆಯ ಬಳಿ ಬಿಚ್ಚುಗತ್ತಿಯ ಸೈನಿಕರ ಪಡೆಯೇ ಇದೆ.

ತಿರು:—ನೀನು ನಮ್ಮ ಆಪ್ತಸೇವಕ. ಭಕ್ತಿಯಿಂದ ಬಿಡು. ಅಥವಾ ಹಣವನ್ನು ತೆಗೆದುಕೊಂಡು ಬಿಡು.

ಜಕ್ಕಣ್ಣ:—ನನಗೆ ಹಣದ ಪಿಶಾಚಿ ಮೆಟ್ಟಿಕೊಂಡಿಲ್ಲ. ನನಗೆ ಬೇಡ. ನೀವು ಅಲ್ಲಿ ಹೋಗಿ ಮಾಡುವುದಾದರೂ ಏನು? ಬಹುಮಂದಿ ಸೈನಿಕರಿದ್ದಾರೆ. ಅಲ್ಲದೆ ಅಪ್ಪಾಜಿಯವರೂ ಇದ್ದಾರೆ.

ತಿರು:—ಅಪ್ಪಾಜಿಯವರಿದ್ದಾರೆಯೆ? ಒಂದು ಜೊತೆ ಕಣ್ಣುಗಳಿಗೆ ಪ್ರತಿಯಾಗಿ ನಮ್ಮಿಬ್ಬರ ಎರಡು ಜೊತೆ ಕಣ್ಣುಗಳನ್ನು ಸಂತೋಷದಿಂದ ಕೊಡಲು ಸಿದ್ಧರಾಗಿ ಬಂದಿದ್ದೇವೆ.

ಜಕ್ಕಣ್ಣ:—ಅಪ್ಪಾಜಿಯವರು ಅದಕ್ಕೆ ಒಪ್ಪದೆ ಹೋದರೆ?

ತಿರು:—ಜಕ್ಕಣ್ಣಾ, ನೀನು ಹೆಸರಿಗೆ ಸೇವಕ. ಪ್ರೀತಿಯಲ್ಲಿ ಮಗನಿಗಿಂತ, ಸ್ನೇಹಿತನಿಗಿಂತ ಹೆಚ್ಚು. ಹೀಗಿದ್ದವನು ನೀನು. ನಿನ್ನಲ್ಲಿ ಈ

ಮಾರ್ಪಾಟೆ? ನೀನು ಇಲ್ಲಿಂದ ಮುಂದೆ ಬಿಡು. ಉಳಿದುದನ್ನು ನಾವು ನೋಡಿಕೊಳ್ಳುತ್ತೇವೆ.

ಚಿನ್ನಾ:—ಅಪ್ಪಾಜಿಯವರು ಒಪ್ಪದಿದ್ದರೆ, ಅವರು ಕಲಿಸಿದ ಪಾಠವನ್ನು ಅವರಿಗೇ ಒಪ್ಪಿಸಿ ಗುರುದಕ್ಷಿಣೆ ಕೊಡುತ್ತೇನೆ. ಮೊನ್ನೆ ಅಪ್ಪಾಜಿಯವರೇ ಉಪದೇಶ ಮಾಡಿದ್ದರು, ರಾಯರ ಪ್ರಾಣರಕ್ಷಣೆಗಾಗಿ ಅವಶ್ಯ ಕಂಡರೆ ತಮ್ಮ ತಲೆಯನ್ನೂ ಕೂಡ ಹಾರಿಸಬೇಕೆಂದು. ಆಗ ಎಷ್ಟು ಆನಂದವಾಯಿತೋ ಈಗ ಅಷ್ಟು ರೋಷವು ಮನಸ್ಸಿನಲ್ಲಿದೆ. ಸೆರೆಮನೆಗೆ ನುಗ್ಗುವ ಪ್ರಯತ್ನದಲ್ಲಿ ಆದಷ್ಟು ಜನರನ್ನು ಆಹುತಿ ತೆಗೆದುಕೊಂಡು ನಾವೂ ಸಾಯುತ್ತೇವೆ.

ಜಕ್ಕಣ್ಣ:—ನಿಮ್ಮ ಮಾತು ಕೇಳಿ ಆನಂದ. ಅದಕ್ಕೇ ದಣಿಸಿದೆ. ಮನ್ನಿಸಬೇಕು.

ಚಿನ್ನಾ:—ಅಣಕವಾಡುವೆಯಾ? ನಿನ್ನ ದೇಹವನ್ನು ಸೀಳುವೆನು.

ತಿರು:—ದುಡುಕಬೇಡ, ಚಿನ್ನಾ! ಕೊಂಚ ತಾಳ್ಮೆಯಿರಲಿ.

ಜಕ್ಕಣ್ಣ:—ಒಂದು ಗುಟ್ಟು ಮಾತು ಕೇಳಿ. ಆಮೇಲೆ ಸೀಳಿ.

ಚಿನ್ನಾ:—ಏನದು? ಬೇಗ ಹೇಳು.

ಜಕ್ಕಣ್ಣ:—ಇನ್ನೇನೂ ಇಲ್ಲ. ಅಪ್ಪಾಜಿಯವರು ಭೈರರಸ ಒಡೆಯರನ್ನು ಗುಟ್ಟಾಗಿ ಎಲ್ಲಿಗೋ ಕಳುಹಿಸಿದ್ದಾರೆ. ಪ್ರಾಣದ ಮೇಲಿನ ಆಶೆಯನ್ನೂ ಬಿಟ್ಟು ಕೆಲಸ ಮಾಡುತ್ತಿದ್ದಾರೆ. ಸೆರೆಮನೆಯವನೊಬ್ಬ ರೋಗದಿಂದ ಸತ್ತು ಹೋದ. ಅವನ ಕಣ್ಣು ಕೀಳಿಸಿಡಬೇಕೆಂದು ಅಪ್ಪಣೆ ಮಾಡಿದ್ದಾರೆ. ಚಿಕ್ಕರಾಯರನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಗುಟ್ಟಾಗಿಟ್ಟಿರಬೇಕೆಂದಿದ್ದಾರೆ. ಅದಕ್ಕೇ ಹೋಗಿದ್ದಾರೆ.

ಚಿನ್ನಾ:—ನಿಜವೇ! ನೀನು ಹೇಳಿದ ಮಾತೆಲ್ಲಾ ನಿಜವೆ, ಜಕ್ಕಣ್ಣಾ?

ಜಕ್ಕಣ್ಣ:—ನಾನು ಸುಳ್ಳು ಹೇಳಿದ್ದೆಂದು ತಾಯಿ? ಇನ್ನು ನನ್ನ ಮೈ ಸೀಳಿ.

ಚಿನ್ನಾ:—(ನಗುತ್ತ ಹಾರವೊಂದನ್ನು ತೆಗೆದು ಕೊಟ್ಟು) ಇದನ್ನು ನಿನ್ನ ಹೆಂಡತಿಗೆ ಕೊಟ್ಟು ಬಾ. ಆಮೇಲೆ ನಿನ್ನ ಮೈ ಸೀಳುವ ಯೋಚನೆ ಮಾಡು

ತ್ತೀಯೆ. ಮೊದಲೇ ಏಕೆ ಹೇಳಲಿಲ್ಲ? ಬನ್ನಿ ಅಕ್ಕಾ, ಅಪ್ಪಾಜಿಯವರ ಬಳಿಗೆ ಹೋಗೋಣ.

**ತಿರು:**—(ನಕ್ಕು) ನಡೆಯಮ್ಮ. ನಿನ್ನದು ದುಡುಕು; ಚಿನ್ನಾ, ನಡೆಯಮ್ಮ. (ವಜ್ರದ ಉಂಗುರವೊಂದನ್ನು ಜಕ್ಕಣ್ಣನಿಗೆ ಕೊಟ್ಟು) ನಿನ್ನ ಹೆಂಡತಿಗೆ ಇದನ್ನು ಕೊಡು ಜಕ್ಕಣ್ಣಾ. (ಜಕ್ಕಣ್ಣನು ನಮಸ್ಕರಿಸುವನು) ನಡೆಯಿರಿ, ಹೋಗೋಣ

(ಹೋಗುವರು)

(ತೆರೆ ಬೀಳುವುದು)

—

## ದೃಶ್ಯ ೮

[ವೀರನರಸಿಂಹನ ಅಂತಃಪುರ. ಲಾವಂಚದ ದೊಡ್ಡ ಬೀಸಣಿಗೆಗಳಿಂದ ಬೀಸುತ್ತಿದ್ದ ಸೇವಕರಿಬ್ಬರೂ ಅರಸನಿಗೆ ಸ್ವಲ್ಪ ನಿದ್ದೆಯು ಜೊಂಪು ಹತ್ತಿದುದನ್ನು ಸಂಜ್ಞೆಯಿಂದ ಸೂಚಿಸಿ, ಸದ್ದಾಗದಂತೆ ದೂರ ಸರಿದು ರಂಗಸ್ಥಳದಿಂದ ಹೋಗುವರು. ವೀರನರಸಿಂಹನ ಕುಮಾರನು ಪ್ರವೇಶಿಸಿ ಮಂಚದ ಬಳಿಗೆ ಹೋಗುವನು.]

**ವೀರ:**—(ಧಿಗ್ಗನೆದ್ದು ಕುಳಿತು ಕಣ್ಣು ತೆರೆಯದೆ) ಪಿಶಾಚಿ! ದೂರ ತೊಲಗು.

**ಕುಮಾರ:**—(ಸಮೀಪಕ್ಕೆ ಹೋಗಿ) ಆಶೆಯಿಂದ ಮಾತನಾಡಲು ಬಂದರೆ, 'ಪಿಶಾಚಿ' ಅನ್ನುತ್ತೀಯಾ ಅಪ್ಪಾಜಿ?

**ವೀರ:**—(ಕಣ್ಣು ತೆರೆಯದೆ) ಏನೆಂದೆ? ನನ್ನ ಮಗನಿಗೆ ಪಟ್ಟವಾಗುವುದಿಲ್ಲವೆ? ಅವನು ಅನರ್ಹನೆ? ಆಗಲಿ! ದೂರ ತೊಲಗು. (ಕುಮಾರನು ಭೀತಗೊಂಡು ಕಕ್ಕಾಬಿಕ್ಕಿಯಾಗಿ ನಿಲ್ಲುವನು) ತೊಲಗುವುದಿಲ್ಲವೆ? (ಕಣ್ಣುಮುಚ್ಚಿ ಕೈಗಳನ್ನು ನೀಡಿ, ಕುಮಾರನನ್ನು ತಬ್ಬಿ ಹಿಡಿದು ಅಮುಕುತ್ತ) ತೊಲಗು! ಇಲ್ಲವಾದರೆ ಕತ್ತು ಕಿವಿಚಿ ಕೊಲ್ಲುವೆನು.

**ಕುಮಾರ:**—ಅಯ್ಯೋ! ಸತ್ತೆ...ಸತ್ತೆ...ನಾನು...ನಾನು...ಕಣ್ಣು ಬಿಡಿ, ಅಪ್ಪಾಜಿ! ಕಣ್ಣು ಬಿಡಿ. ಹೋದೆ..ಅಯ್ಯೋ!..ಅಯ್ಯೋ! (ಸೇವಕನೊಬ್ಬನು ಓಡಿ ಬಂದು ದಿಗ್ಭ್ರಮೆಯಿಂದ ನಿಲ್ಲುವನು)

**ವೀರ:**—(ಕಣ್ತೆರೆದು) ನೀನೆ. ನೀನೆ? ಯಾವಾಗ ಬಂದೆ? (ಬಿಡುವನು)

**ಕುಮಾರ:**—ನಾನೆ? ನಾನೆ? ನಾನಂತೆ, ನೀನಂತೆ. ನನ್ನ ಮೈಯೆಲ್ಲಾ ಹೋಯ್ತು. ಕೊಲ್ಲುವೆನೆಂತ ಹೆದರಿಸಿದರಿ ಅಪ್ಪಾಜಿ.

**ವೀರ:**—ಹಾಳು ಕನಸು. ನೆನಪಿಗೆ ತರಬೇಡ.

**ಕುಮಾರ:**—ಕನಸಂತೆ! ಸರಿಯೆ. ಒಳ್ಳೆಯ ಕನಸು. ಮೈಯನ್ನೆಲ್ಲಾ ನೋಯಿಸಿದಿರಿ. ಕೊಲ್ಲುವುದಾಗಿ ಹೇಳಿದಿರಿ. ನೀವು ಚಿಕ್ಕಪ್ಪಾಜಿಯವರನ್ನು ಕೊಲ್ಲಿಸಿದ್ದೀರಂತೆ. ಯಾರೋ ಭೈರರಸರನ್ನು ಕೊಲ್ಲಿಸಿದ್ದೀರಂತೆ. ಒಬ್ಬ ರಾಜಕುಮಾರನನ್ನು ಹಿಂದೆಯೇ ಕೊಲ್ಲಿಸಿದ್ದೀರಂತೆ. ಎಲ್ಲರೂ ಹೇಳ್ತಾರೆ. ನಾನು ಸುಳ್ಳೆಂತ ಇದ್ದೆ. ಇವೊತ್ತು ನನ್ನೂ ಕೊಲ್ಲುವುದಾಗಿ ಹೇಳಿದಿರಿ. ಅಬ್ಬ! ಮೈ ನಡುಗುತ್ತೆ. ಎಲ್ಲರನ್ನೂ ಕೊಲ್ಲುವುದೇ ನಿಮ್ಮ ಕೆಲಸ.

**ವೀರ:**—ಅಯ್ಯೋ!

**ಅಪ್ಪಾಜಿ:**—(ಪ್ರವೇಶಿಸಿ, ತನ್ನೊಡನೆ ಹಿಂದೆ ಬಂದ ಸೇವಕನನ್ನು ತೋರಿಸಿ) ಇವನು ಓಡಿ ಬರುತ್ತಿದ್ದ, ಹೇಳಿದ. ಏನಾಯಿತು?

**ಕುಮಾರ:**—ಹೇಳುವುದೇನು? ಅಪ್ಪಾಜಿ ನನ್ನ ಕೊಲ್ಲುವುದರಲ್ಲಿದ್ದರು. ನನ್ನ ಕೊಲ್ಲುತ್ತಾರಂತೆ. ಹೊರಗೆ ಹೋದರೆ ಕುದುರೆ ತಂದು ಭಯಪಡಿಸುತ್ತಾರೆ. ಮನೇ ಉದ್ದದ ಕುದುರೆ ತಂದು 'ಸವಾರೀ ಮಾಡು, ಸವಾರೀ ಮಾಡು' ಅನ್ನುತ್ತಾರೆ. ಅವೊತ್ತು ನಾನು ಕುದುರೆಯಿಂದ ಬಿದ್ದ ನೋವೇ ಇನ್ನೂ ಹೋಗಿಲ್ಲ. ಮತ್ತೆ ಅದೇ ಹಾಳು ಕುದುರೆಯ ಮೇಲೆ ಇವೊತ್ತು ಸಂಜೆಗೆ ತಿರುಗಿ ಸವಾರಿ ಮಾಡಬೇಕಂತೆ.

**ಅಪ್ಪಾಜಿ:**—ಸುಮ್ಮನಿರು, ಕುಮಾರ! ಅವರಿಗೆ ಆಯಾಸವಾಗಿದೆ. (ತಲೆ ಸವರುವನು)

**ಕುಮಾರ:**—ನನ್ನ ಮೈಯೆಲ್ಲಾ ಜಜ್ಜಿ ಬಜ್ಜಿಯಾಗಿ ಹೋಗಿದೆ. ಕೇಳುವವರೇ ಇಲ್ಲ. ಕುದುರೆ ಭಯ ತಪ್ಪಿಸಿಕೊಳ್ಳಬೇಕೆಂತ ಇಲ್ಲಿಗೆ ಬಂದರೆ, ಇಲ್ಲಿ ಇನ್ನೂ ಭಯ! ನಾನು ಕತ್ತಿಯ ವರಸೆ ಕಲಿಯಬೇಕಂತೆ. ಅದರ ಪೀಡೆ ಬೇರೆ. ನನ್ನ ಮೈಗೆಲ್ಲಿ ಆ ಹಾಳು ಕತ್ತಿ ತಗಲುವುದೋ ಎಂದು ಭಯ.

**ವೀರ:**—(ನಿಟ್ಟುಸಿರು ಬಿಟ್ಟು) ಇವೊತ್ತು ಕುದುರೆ ಸವಾರಿ ಬೇಡ. ನಿನ್ನ ತಾಯಿಯ ಅಂತಃಪುರಕ್ಕೆ ಹೋಗು ಮಗು. (ಕರೆದೊಯ್ಯಲು ಸೇವಕರಿಗೆ ಸಂಜ್ಞೆ ಮಾಡುವನು)

**ಕುಮಾರ:**—(ಹಿಗ್ಗುತ್ತ) ಬದುಕಿದೆ. ( ಸೇವಕರೊಡನೆ ಹೋಗುವನು. )

**ಅಪ್ಪಾಜಿ:**—ಆಯಾಸ ಮಾಡಿಕೊಳ್ಳಬಾರದು. ಎದ್ದು ಕುಳಿತುಕೊಳ್ಳ ಕೂಡದೆಂದು ವೈದ್ಯರು ಹೇಳಲಿಲ್ಲವೆ ?

**ವೀರ:**—ನನ್ನ ಕಥೆ ಮುಗಿಯುವುದರಲ್ಲಿದೆ, ಅಪ್ಪಾಜಿ.

**ಅಪ್ಪಾಜಿ:**—ಈ ಬಗೆಯ ಮಾತು ಸನ್ನಿಧಾನದಿಂದ ಬರಲೇಬಾರದು.

**ವೀರ:**—ಅಪ್ಪಾಜಿ ! ಪಾಪಿಷ್ಟನಿಗೆ ಮರಣದಲ್ಲಿಯೂ ಸುಖವಿಲ್ಲ. ಕಣ್ಣು ಮುಚ್ಚಿದರೆ, ನಿದ್ರೆಯ ಜೊಂಪು ಹತ್ತಿದರೆ, ನಾನು ಹಿಂದೆ ಕೊಲೆ ಮಾಡಿಸಿದ ರಾಜಕುಮಾರ ಸಿದ್ಧ. ಅಯ್ಯೋ ! ಸಿಂಹಾಸನಾಧಿಕಾರಿಯಾದ ಆ ನಿರಪರಾಧಿ ಬಾಲಕನನ್ನು ನಾನು ಕೊಲೆಮಾಡಿಸಿದೆ. ಶಿಶುವಾಗಿದ್ದ ಅವನ ಹೆಸರಿನಲ್ಲಿ ತಂದೆಯವರು ಎಷ್ಟು ವಿಚಕ್ಷಣೆಯಿಂದ ಪ್ರಭುತ್ವ ಮಾಡಿದರು ? ನಾನೂ ಹಾಗೆ ಮಾಡಿದ್ದರೆ. . . .?

**ಅಪ್ಪಾಜಿ:**—ರೋಗವು ಗುಣವಾದ ಮೇಲೆ ಉಳಿದ ಮಾತು. . . . ಆಯಾಸವಾಗುತ್ತದೆ.

**ವೀರ:**—ಈ ಸಲ ನಾನು ಉಳಿಯುವುದಿಲ್ಲ, ಅಪ್ಪಾಜಿ ! ಉಳಿಯಲೂ ಬಾರದು. ಆ ರಾಮಲಿಂಗಯ್ಯ—ದೇವರಂಥ ಮನುಷ್ಯ—ಧರ್ಮಸಚಿವ—ಅವನ ಮಾತೂ ಕೇಳಲಿಲ್ಲ. ಸೆರೆಮನೆಯಲ್ಲಿ ಅವನು ಕೊಳೆಯುತ್ತಿದ್ದಾನೆ. ತಂದೆಗೆ ಪ್ರತಿಯಾಗಿ ತಂದೆಯಂತಿರುವ ನಿಮ್ಮನ್ನು ನೋಯಿಸಿದೆ. ಇಮ್ಮಡಿ ಭೈರರಸ ಒಡೆಯನನ್ನೂ ಕೊಲೆಮಾಡಿಸಿದೆ. ಮುಂದೆ ನನ್ನ ಮಗನಿಗೆ ರಾಜ್ಯವಾಗಬೇಕೆಂಬ ದುರಾಲೋಚನೆಯಿಂದ ತಮ್ಮನ ಕಣ್ಣು ಕೀಳಿಸಿ ಅವನ ಮರಣಕ್ಕೆ ಕಾರಣನಾದೆ. ಕುದುರೆಯನ್ನೂ ಕತ್ತಿಯನ್ನೂ ಕಂಡರೆ ಹೆದರುವ ಈ ಹೇಡಿಗೆ ವಿಜಯನಗರದ ಸಾಮ್ರಾಜ್ಯ ಸಿಂಹಾಸನವು ದಕ್ಕೀತೆ ? ವಿಧಿಯು ಹೇಡಿತನದ ಪುತ್ಥಳಿಯನ್ನು ಕರುಣಿಸಿ ನನ್ನ ಅಕಾರ್ಯಗಳಿಗೂ ದುರಾಶೆಗೂ ತಕ್ಕ ಶಿಕ್ಷೆ ಮಾಡಿತು. ಅಯ್ಯೋ ! ಈಗ ಕೃಷ್ಣದೇವರಾಯ ಬದುಕಿದ್ದರೆ ? ಮನಸ್ಸೂ ಹೃದಯವೂ ಪಶ್ಚಾತ್ತಾಪದಿಂದ ಹೊತ್ತಿ ಉರಿಯುತ್ತಿವೆ. ಅಯ್ಯೋ ಜ್ವಾಲೆ. . ಜ್ವಾಲೆ. . ಅಂತರಂಗದ ಜ್ವಾಲೆ ! ರಾಮಲಿಂಗಯ್ಯ ಹೇಳಿದ್ದ. ಸಂತಘಂಟಾನಾದದಿಂದ ರಾಜ್ಯಲಕ್ಷ್ಮಿಯ ಪೂಜೆ ನಡೆಯ

ಬೇಕೆಂದು. ವಿದ್ಯಾ, ವಿನಯ, ಸತ್ಯ, ಧರ್ಮ, ವಿಜಯಗಳೆಂಬ ಪಂಚ ಘಂಟೆ ಗಳ ನಾದದಿಂದ ತಾಯಿ ಭುವನೇಶ್ವರಿಯ ಸೇವೆ ನಡೆಯಬೇಕೆಂದು, ಆತ ಪದೇ ಪದೇ ಹೇಳಿದ. ಅಪ್ಪಾಜಿ, ನಾನು ಕಣ್ಣು ಮುಚ್ಚಿಕೊಂಡ ಮೇಲೆ ಆತನೂ ನೀವೂ ಆ ತಾಯಿಗೆ ಆ ಸೇವೆ ನಡೆಯಿಸಿ. ಅಯ್ಯೋ! ನನ್ನ ಆಜ್ಞೆ ಯನ್ನು ನೆರವೇರಿಸದೆ, ಭೈರರಸನನ್ನೂ ನನ್ನ ತಮ್ಮನನ್ನೂ ನೀವಾದರೂ ಉಳಿಸಿದ್ದರೆ.... ? ಜ್ವಾಲೆ..ಜ್ವಾಲೆ..ಸಂಕಟ... (ಬೀಳುವನು)

ಅಪ್ಪಾಜಿ:—ಉಳಿಸಿದ್ದೇನೆ....(ನೋಡಿ) ಮತ್ತೆ ಮೂರ್ಛೆ. ಮುಂದೆ ಗತಿಯೇನು ? ಯಾವಲ್ಲಿ ? (ಪ್ರವೇಶಿಸಿದ ಸೇವಕನೊಡನೆ) ವೈದ್ಯರನ್ನು ಕರೆ. (ಸೇವಕನು ಹೋಗುವನು) ವೈದ್ಯರು ಹೇಳಿದ್ದರು....(ಏನನ್ನೋ ಯೋಚಿಸುತ್ತಾ ನಿಲ್ಲುವನು)

(ತೆರೆ ಬೀಳುವುದು)

—

# ಮೂರನೆಯ ಅಂಕ



## ದೃಶ್ಯ ೧

[ ಉದಯಗಿರಿಯ ದುರ್ಗದ ಕೋಟೆ. ರಂಗನಾಥದೀಕ್ಷಿತನೂ ಬಸವರಸನೂ ಪ್ರವೇಶಿಸುವರು.]

**ರಂಗನಾಥ**:—ಬಸವರಸರೇ, ಈ ಕೋಟೆಯನ್ನು ಎಷ್ಟು ಕಡೆಗಳಲ್ಲಿ ನೋಡಿದರೂ ತೃಪ್ತಿಯಿಲ್ಲ. ಉದಯಗಿರಿ–ಉದಯಗಿರಿ–ಎಂತಹ ಹೆಸರು ? ಇದರ ಒಡೆಯರಾದ ಗಜಪತಿ ಪ್ರತಾಪರುದ್ರ ಮಹಾರಾಜರ ನಾಮಧೇಯಕ್ಕೆ ತಕ್ಕ ಹೆಸರು. ಅವರನ್ನು ಆಶ್ರಯಿಸಲು ವಿಜಯನಗರವನ್ನು ಬಿಟ್ಟು ಬಂದ ಮೇಲೆ ಮನಸ್ಸೇ ಒಂದು ಬಗೆಯಾಗಿದೆ. ಆದಿರಲಿ. ಎಂತಹ ಕೋಟೆ ! ಈ ಊರಿಗೆ ಬಂದ ಮೇಲೆ ಇದನ್ನು ಪರಿಶೀಲಿಸಲು ಇವೊತ್ತಿನವರೆಗೂ ಅವಕಾಶ ವಾಗಲಿಲ್ಲ.

**ಬಸವರಸ**:—ವಿಜಯನಗರದ ಏಳು ಸುತ್ತಿನ ಕೋಟೆಯ ಮುಂದೆ ಈ ಕೋಟೆಯೆ ? ನಾವು ಗಜಪತಿಮಹಾರಾಜರನ್ನು ಆಶ್ರಯಿಸಲು ಬಂದಿರುವು ದೇನೋ ನಿಜ. ಆದರೂ ಆ ಕೋಟೆಯನ್ನು ಬಿಟ್ಟು ಈ ಕೋಟೆಯನ್ನು ಹೊಗಳಬೇಕೆ ? ಇಷ್ಟಕ್ಕೂ ಈ ಕೋಟೆಯೂ ವಿಜಯನಗರಸಾಮ್ರಾಜ್ಯಕ್ಕೇ ಸೇರಿರಲಿಲ್ಲವೆ ? ಗಜಪತಿಮಹಾರಾಜರು ಈಚೆಗೆ ತಾನೆ ಇದನ್ನು ಗೆದ್ದಿರು ವುದು ?

**ರಂಗ**:—ಗಾಳಿ ಹೇಗೆ ಬೀಸುತ್ತಿದೆಯೋ ಎಂದು ತಿಳಿದುಕೊಳ್ಳಲು ಕೇಳಿದೆ. ತಮಗೆ ಅಸಮಾಧಾನವಾದೀತೆಂದು ಅಳುಕಿದೆ. ತಮ್ಮ ಕೋಪ ಕಿಡಿಯನ್ನುಗುಳುವ ಕೋಪ.

**ಬಸವ**:—ಆ ಮಾತು ಸಾಲದು. ರಂಗನಾಥದೀಕ್ಷಿತರೇ, ಕೆಂಡವನ್ನೆರ

ಜುವ ಕೋಪವೆಂದು ಹೇಳಿ. ದಾವಾಗ್ನಿ ಸದೃಶವಾದ ಕೋಪವೆಂದು ಹೇಳಿ. ನನಗೂ ಭೈರರಸನಿಗೂ ದೇಹಗಳೆರಡು; ಜೀವವು ಮಾತ್ರ ಒಂದೇ. ಆತನಂತಿರುವ ಮಿತ್ರನುಂಟೇ ಇನ್ನು ? ಆತನನ್ನು ಕಳೆದು ಕೊಂಡು ಭಂಡ-ಬಾಳು ಹೊರೆಯುತ್ತಿದ್ದೇನೆ. ತೋಳು ಹೊರೆಯಾಗಿ ಉಸಿರಾಡುತ್ತಿದ್ದೇನೆ. ಸೇಡಿಗಾಗಿ ಹೊಂಚುತ್ತ ಕಾದಿದ್ದೇನೆ. ಸೇಡು ತೀರಿಸುವುದರಲ್ಲಿ, ಮರಣಕ್ಕೂ ಸಿದ್ಧನಾಗಿದ್ದೇನೆ. ವೀರನರಸಿಂಹರಾಯರು ನನ್ನ ಪ್ರಾಣದ ಪ್ರಾಣದಂತಿದ್ದ ಭೈರರಸನಿಗೆ—ಆ ರಾಜಭಕ್ತನಿಗೆ—ಆ ಸಾಮ್ರಾಜ್ಯಸೇವಕನಿಗೆ—ಮರಣದಂಡನೆಯನ್ನು ಅನ್ಯಾಯವಾಗಿ ವಿಧಿಸಿ ದರು. ಅವರ ಅನ್ಯಾಯದ ಅಪ್ಪಣೆಯನ್ನು ಸದ್ದಿಲ್ಲದೆ ನೆರವೇರಿಸಿಯೂ ಅಪ್ಪಾಜಿಯವರು, ಆತನು ಜೀವದಿಂದಿದ್ದಾನೆಂದು ಸುಳ್ಳು ಹೇಳಿದರು. 'ಅವ ನನ್ನು ತೋರಿಸಿ' ಎಂದರೆ 'ತಡೆಯಿರಿ, ತಡೆಯಿರಿ, ತಾಳ್ಮೆಯಿರಲಿ. ನೀವು ಖಂಡಿತ ಅವರನ್ನು ಕಂಡು ಹರ್ಷಿಸುವಿರಿ'—ಎಂದು ಹೇಳುತ್ತಿದ್ದಾರೆ. ಕಾಲಹರಣವಾದಂತೆಲ್ಲ ನನ್ನ ಹೃದಯದ ದಳ್ಳುರಿಯು ಹೇಗೆ ಪ್ರಜ್ವಲಿಸು ತ್ತಿದೆಯೆಂಬುದನ್ನು ಪಾಪ, ಪಾಪ, ಆ ವೃದ್ಧರೇನು ಬಲ್ಲರು ? ಅಪ್ಪಾಜಿ ಯವರು ನಮ್ಮೆಲ್ಲರ ತಂದೆಯಂತಿದ್ದೂ ಹೀಗೆ ಮಾಡಿದರು. ನಮ್ಮ ಸೇವೆಗೆ ಇದೇ ಫಲ. ನನ್ನ ಪ್ರಾಣವೇ ಬಲಿಯಾಗಲಿ, ನನ್ನ ಸೇಡು ತೀರಿ ದರೆ ಸಾಕು. ನನ್ನ ದುಃಖವನ್ನು ನೀವು ಕಾಣಿರಿ.

**ರಂಗ**:—ನಾನು ಬಲ್ಲೆ. ಬಸವರಸರೆ ! ನಾನು ಬಲ್ಲೆ. ವೀರನರಸಿಂಹ ರಾಯರ ತಂದೆ ನರಸಣ್ಣನಾಯಕರ ಕಾಲದಲ್ಲಿ ವಾಜಪೇಯ ಯಾಗ ಮಾಡಿ ಶ್ರೇಯಃಪ್ರಾರ್ಥನೆ ಮಾಡಿದೆ. ಆಗ್ಗೆ ನನಗಿದ್ದ ಗೌರವವೆಲ್ಲಾ ವೀರನರಸಿಂಹ ರಾಯರು ಸಿಂಹಾಸನವನ್ನೇರಿದೊಡನೆಯೇ ಮಾಯವಾಗಿ ನನ್ನ ಪೌರೋ ಹಿತ್ಯಕ್ಕೇ ಗ್ರಹಣ ಹಿಡಿಯಿತು. ನನ್ನ ಸ್ಥಾನದಲ್ಲಿ ಅಪ್ಪಳಾಚಾರ್ಯರು ಪುರೋಹಿತರಾದರು. ನನಗಿಂತ ಚಿಕ್ಕವನಾದ ಆ ಪೋರ, ಆ ರಾಮಲಿಂಗ ಧರ್ಮಸಚಿವನಾದ. ವೇದಶಾಸ್ತ್ರಸಂಪನ್ನನಾದ ನನಗೆ ಅದಕ್ಕರ್ಹತೆಯಿಲ್ಲ ವಾಯಿತು. ನನಗೇನು ದುಃಖವಿಲ್ಲವೆ ? ಆದರೂ..ಆದರೂ..

**ಬಸವ**:—'ಆದರೂ..ಆದರೂ'....ಏನು ಆ ಸಂದೇಹ ?

ರಂಗ:—ನಾವು ಶತ್ರುಪಕ್ಷವನ್ನಾಶ್ರಯಿಸಿ ರಾಜದ್ರೋಹವನ್ನೆಸಗುವುದು ಪಾಪವಲ್ಲವೆ—ಎಂದು ಸಂಶಯ.

ಬಸವ:—(ಅಪಹಾಸ್ಯದ ಅಣಕದ ಧ್ವನಿಯಿಂದ) ಓಹೋ! ಹಾಗೋ! ಶತ್ರುಪಕ್ಷದವರನ್ನು ಆಶ್ರಯಿಸುವ ರಾಜದ್ರೋಹವು ಅಪರಾಧ. ಆದರೆ ವೀರನರಸಿಂಹರಾಯರು ಸಿಂಹಾಸನಾಧಿಕಾರಿಯಾಗಿದ್ದ ಸಾಳ್ವ ನರಸಿಂಹ ರಾಯರ ಪುತ್ರನನ್ನು ಕೊಲ್ಲಿಸಿ ತಾನೆ ಸಾಮ್ರಾಟರಾದರು? ಅದು ಪಾಪ ವಲ್ಲವೇನು? ಮುಳ್ಳಿನಿಂದ ಮುಳ್ಳನ್ನು ತೆಗೆದಂತೆ ಪಾಪಕೃತ್ಯದಿಂದ ಪಾಪ ಕೃತ್ಯಕ್ಕೆ ಪರಿಹಾರ ಮಾಡೋಣ.

ರಂಗ:—ಆದರೆ, ವೀರನರಸಿಂಹರಾಯರು ಮೃತರಾದರಲ್ಲಾ! ಕೃಷ್ಣ ದೇವರಾಯರು ಪಟ್ಟಕ್ಕೆ ಬಂದಿದ್ದಾರಲ್ಲಾ!

ಬಸವ:—ನಿಜವೇ! ಆದರೆ..ಆದರೆ..ಅವರೇಕೆ ನಿಮ್ಮನ್ನು ಮತ್ತೆ ಪುರೋಹಿತರಾಗಿ ನೇಮಕ ಮಾಡಿಕೊಂಡು ಹಿಂದಿನ ಅನ್ಯಾಯಕ್ಕೆ ನ್ಯಾಯ ಮಾಡಲಿಲ್ಲ? ಅವರಾಗಲಿ, ಅಪ್ಪಾಜಿಯವರಾಗಲಿ ನಮ್ಮ ಇಮ್ಮಡಿ ಭೈರರ ಸನ ವಧೆಯು ಅನ್ಯಾಯವಾಗಿ ನಡೆಯಿತೆಂದಾದರೂ ತಿಳಿಸದೆ ಹೋದು ದೇಕೆ? ರಾಜಭಕ್ತಿಗೆ ಮರಣದಂಡನೆಯೇ ಫಲವೆ? ಇಮ್ಮಡಿ ಭೈರರಸನ ಮೃತದೇಹವನ್ನೂ ನನ್ನ ಸ್ವಾಧೀನಕ್ಕೆ ಕೊಡಲಿಲ್ಲ. ಅವನು ಒದುಕಿದ್ದಾ ನೆಂದು ಅಪ್ಪಾಜಿಯವರಂಥವರೂ ಪದೇ ಪದೇ ಸುಳ್ಳು ಹೇಳಿದ್ದಾರೆ. (ಕತ್ತಿ ಯನ್ನು ಹಿಡಿದು) ನನ್ನ ದೇಹದಲ್ಲಿರುವ ಪ್ರತಿಯೊಂದು ರಕ್ತಕಣವೂ 'ಸೇಡು, ಸೇಡು' ಎಂದು ಮಿಡಿಯುತ್ತಿದೆ. ದೇಹದಲ್ಲಿ ಒಂದು ರಕ್ತದ ಬಿಂದು ಉಳಿ ದಿರುವ ವರೆಗೂ ರಣಾಂಗಣದಲ್ಲಿ ಕಡಿದಾಡಿ ಸೇಡು ತೀರಿಸುತ್ತೇನೆ. ಮೊದಲು ಭೇದೋಪಾಯದಿಂದ ಒಳಸಂಚು. ಆ ಬಳಿಕ ದಂಡೋಪಾಯ ವನ್ನು ಹೂಡಿ ರುಂಡಗಳನ್ನು ಚೆಂಡಾಡಿ, ಅವಶ್ಯವಾದರೆ (ತಲೆಯನ್ನು ಧೀರೋನ್ನತ್ತತೆಯಿಂದ ಕೊಂಚ ತಗ್ಗಿಸಿ, ತೂಗಿ) ಈ ರುಂಡವನ್ನೇ ಒಪ್ಪಿಸಿ ನನ್ನ ಪ್ರಿಯ ಮಿತ್ರನಲ್ಲಿಗೆ ಹೊರಟು ಹೋಗುತ್ತೇನೆ.

ಬಲಭದ್ರಪಾತ್ರ:—(ಪ್ರವೇಶಿಸಿ) ಭಲಾ! ಚೆನ್ನಾಗಿ ಹೇಳಿದಿರಿ...... ಶಾಂತರಾಗಿ, ಶಾಂತರಾಗಿ.

ಬಸವರಸ:—ಶಾಂತಿಯಿಂದಿರಬೇಕೆಂದೇ ನನಗೂ ಆಶೆ. ಆದರೆ ಸಾಧ್ಯವಿಲ್ಲ. ಪ್ರತಾಪರುದ್ರ ಗಜಪತಿ ಮಹಾರಾಜರಿಂದಲೇ ನಮ್ಮ ಕಾರ್ಯವು ನೆರವೇರಬೇಕು. ಬಲಭದ್ರಪಾತ್ರರೆ, ತಾವು ಅವರ ರಾಯಭಾರಿಗಳು. ನಾವು ತಮಗೆ ಎಲ್ಲ ಸಂಗತಿಗಳನ್ನೂ ತಿಳಿಸಿಯೇ ಇದ್ದೇವೆ. ಕೋಟೆಯನ್ನು ನೋಡಿ ಹರ್ಷಿಸಿದೆವು.

ಬಲಭದ್ರ:—ಸಂತೋಷ (ನಕ್ಕು) ಸ್ವಂತ ರಾಜ್ಯವನ್ನೇ ಬಿಟ್ಟು ಶತ್ರು ಪಕ್ಷಕ್ಕೆ ಸೇರಲು ಇಲ್ಲಿಗೆ ಬಂದವರನ್ನು ನಂಬುವ ಬಗೆ ಹೇಗೆಂದೂ ಮುಂದೆ ನಮ್ಮನ್ನೂ ಬಿಟ್ಟು ಮತ್ತೊಂದು ರಾಜ್ಯಕ್ಕೆ ಹೋದರೆ ಗತಿಯೇನೆಂದೂ ಮಹಾರಾಜರು ಹೇಳಿದರು.

ಬಸವ:—ನನಗೆ ನ್ಯಾಯ ದೊರೆತಿದ್ದರೆ ನಾನು ವಿಜಯನಗರವನ್ನು ಬಿಟ್ಟು ಇಲ್ಲಿಗೆ ಬರುತ್ತಲೇ ಇರಲಿಲ್ಲ. ನನ್ನ ಮಿತ್ರನಾದ, ನಿರಪರಾಧಿ ಭೈರರಸ ಒಡೆಯನಿಗೆ ಹಿಂದಿನ ಸಾರ್ವಭೌಮರು ಮರಣದಂಡನೆ ವಿಧಿಸಿದುದನ್ನು, ಗಜಪತಿ ಮಹಾರಾಜರ ರಾಯಭಾರಿಗಳಾಗಿ ಅಲ್ಲಿದ್ದ ತಾವೇ ಬಲ್ಲಿರಿ. ಮೃತನ ದೇಹವನ್ನು ಕೂಡ ನಮ್ಮಲ್ಲಿಗೆ ಕಳುಹಿಸಲಿಲ್ಲ. ನಾನು ಕಾರ್ಕಳಕ್ಕೆ ಹೋಗಿ, ಅವನ ಬಂಧು ಮಿತ್ರರನ್ನು ಸಂತೈಸಿ ವಿಜಯನಗರಕ್ಕೆ ಬಂದೆ; ಮಹಾಪ್ರಧಾನ ಅಪ್ಪಾಜಿಯವರನ್ನು ಕಂಡೆ; ಕೇಳಿದೆ; ಗೋಳಿಟ್ಟೆ; ಭೈರರಸನ ತಲೆಯನ್ನು ಕಡಿಸಲಿಲ್ಲವಂತೆ! ಆದರೆ ಅವನೆಲ್ಲಿಗೆ ಹೋದನೆಂಬುದು ಸದ್ಯಕ್ಕೆ ತಿಳಿಯುವಂತಿಲ್ಲವಂತೆ! ಈ ಬಗೆಯ ಸುಳ್ಳು, ಈ ಕೃತ್ರಿಮ, ಈ ನಟನೆ, ನನಗೆ ಬೇಡ. ಈ ಬಸವರಸನ ರಕ್ತವೇ ಕುದಿಯುತ್ತಿದೆ.

ರಂಗ:—ನಮ್ಮ ಸಮ್ರಾಟರ ತಂದೆ ನರಸಣ್ಣನಾಯಕರು ತ್ರಿನೇತ್ರ ನರಸಣ್ಣನಾಯಕರಂತೆ. ಅವರು ತಮ್ಮ ಮಹಾರಾಜರ ತಂದೆಯವರಾದ ಪುರುಷೋತ್ತಮ ಗಜಪತಿಯವರನ್ನು ಯುದ್ಧದಲ್ಲಿ ಗೆದ್ದರಂತೆ. ತ್ರಿನೇತ್ರ ನರಸಣ್ಣನಾಯಕರಂತೆ—ತ್ರಿನೇತ್ರ ನರಸಣ್ಣನಾಯಕರು!

ಬಲಭದ್ರ:—ಆಹ! ಅದಕ್ಕೇನು? ತೆಂಗಿನ ಚಿಪ್ಪಿಗೂ ಮೂರು ಕಣ್ಣು. ಅದೂ ತ್ರಿನೇತ್ರನೇ? ವಿಜಯನಗರದ ಆಸ್ಥಾನದಲ್ಲಿ 'ಗಜಪತಿರಾಯೇಭ ಗಂಡಭೇರುಂಡ'—ಎಂಬ ಬಿರುದಿನ ಘೋಷವನ್ನು ಕೇಳಿ ಕೇಳಿ ನನ್ನ ಮೈ ಚಿಟುಗುಟ್ಟುತ್ತಿದೆ.

ರಂಗ:—ಗಜಪತಿ ಮಹಾರಾಜರು ಈ ಉದಯಗಿರಿ ಕೋಟೆಯನ್ನು ಗೆದ್ದಿದ್ದಾರೆ. ಆದರೂ—

ಜಿತ್ವಾ ಗಜಪತಿಂ ರಾಯಂ ಬಿರುದಾಂ ಪ್ರಾಪ ಸಾಹಸಾತ್ ।
ಗಜಪತ್ಯಾಖ್ಯರಾಯೇಭಗಂಡಭೇರುಂಡ ಇತ್ಯಮುಮ್ ॥

ಎಂದು ಅರಮನೆಯಲ್ಲಿ ಇನ್ನೂ ಹಾಡಿಸುತ್ತಿದ್ದಾರೆ. ಕೋಟೆಯೇ ಕೈಬಿಟ್ಟು ಹೋಗಿಯೂ ಅದೇ ಹೊಗಳಿಕೆ !

ಬಲಭದ್ರ:—ಮಧ್ಯಾಹ್ನದ ವೇಳೆಯು ಸಮೀಪಿಸುತ್ತಿದೆ. ಸಮಯ ನಿರೀಕ್ಷೆಯಿಂದಿದ್ದು ಕೃಷ್ಣದೇವರಾಯರನ್ನು ಮುರಿದು ಕಾರ್ಯಸಾಧನೆ ಮಾಡುವ ಪ್ರಯತ್ನವನ್ನು ನಿಧಾನವಾಗಿ ಯೋಚಿಸೋಣ. ಹೋಗೋಣ ಬನ್ನಿ, ಭೋಜನಾನಂತರ ಮತ್ತೆ ಮಾತನಾಡೋಣ.

(ಮೂವರೂ ಹೋಗುವರು)

(ತೆರೆ ಬೀಳುವುದು)

—

## ದೃಶ್ಯ ೨

[ಕೃಷ್ಣದೇವರಾಯನ ಆಸ್ಥಾನ. ಓಲಗದ ಧ್ವನಿ ಕೇಳಿಸುವುದು. ಕೃಷ್ಣದೇವ ರಾಯನು ಪರಿವಾರ ಸಮೇತನಾಗಿ ಅಲ್ಲಸಾನಿ ಪೆದ್ದನ್ನನನ್ನು ಹಸ್ತಲಾಘವದೊಡನೆ ಕರೆದು ಕೊಂಡು ಬಂದು ಭದ್ರಾಸನದ ಮೇಲೆ ಕುಳ್ಳಿರಿಸುವನು. ಅಪ್ಪಾಜಿ, ಮಹಾದಂಡನಾಯಕ, ಕಾಮನಾಯಕ, ಪ್ರತಾಪರುದ್ರ ಗಜಪತಿ ಮಹಾರಾಜನ ರಾಯಭಾರಿಯಾದ ಬಲಭದ್ರ ಪಾತ್ರ, ಅಪ್ಪಳಾಚಾರ್ಯ, ಮುಕ್ಕು ತಿಮ್ಮಯ್ಯ, ಭಟ್ಟುಮೂರ್ತಿ ಕವಿ, ಚಿಕ್ಕಣ್ಣ, ತಿರುಮಲ ರಾಯ, ತಿಮ್ಮಣ್ಣ ಕವಿ ಮುಂತಾದವರು ಪ್ರವೇಶಿಸುವರು. ವಂದಿಮಾಗಧರು "ಸ್ವಸ್ತಿ ಶ್ರೀಮಾನ್ ಮಹಾರಾಜಾಧಿರಾಜ, ರಾಜಪರಮೇಶ್ವರ, ಮೂರು ರಾಯರ ಗಂಡ, ಅರಿ ರಾಯ ವಿಭಾಡ, ಗಜಪತಿರಾಯೇಭ ಗಂಡಭೇರುಂಡ, ಅಷ್ಟದಿಕ್ಕುರಾಯ ಮನೋಭಯಂ ಕರ, ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಾಧೀಶ್ವರ, ಗಜಪತಿ ದಳ ವಿಭಾಡ, ಶ್ರೀವೀರ ಪ್ರತಾಪ ವೀರಕೃಷ್ಣದೇವ ಮಹಾರಾಜಾಧಿರಾಜ ಪರಾಕು" ಎನ್ನುವರು.]

ತಿರುಮಲ:—ಮಹಾಸ್ವಾಮಿ ! ಬಹು ಮಂದಿ ರಾಜರುಗಳ ಮುಕುಟ ಗಳನ್ನು ತಮ್ಮ ಪಾದಧೂಳಿಯಿಂದ ಪವಿತ್ರಗೊಳಿಸಿರುವ ತಾವು ಕರ್ಣಾಟಕ ರತ್ನಸಿಂಹಾಸನಕ್ಕೆ ಭೂಷಣಪ್ರಾಯರು.

**ಕೃಷ್ಣ:**—ಕವಿಶೇಖರ! ನಿನ್ನ ನವಿನುಡಿಗಳಿಂದ ಸಂತಸಗೊಂಡೆನು. ಸಮರಭೂಮಿಯಲ್ಲಿ ನಮಗೆ ದೊರೆತ ವಿಜಯಮಾಲಿಕೆಯು ನಮ್ಮ ಮಹಾಪ್ರಧಾನರ, ಮಹಾದಂಡನಾಯಕರ, ಸಚಿವ ಸೇನಾಪತಿಗಳ ಸಹಾಯದಿಂದ. ಇಂದಿನ ಉತ್ಸವದ ನಲವಿಯಂತೂ ಧರ್ಮಸಚಿವರಾದ ರಾಮಲಿಂಗಯ್ಯನವರದೇ.

**ಅಪ್ಪಾಜಿ:**—ಸಾರ್ವಭೌಮರ ಈ ಮಾತುಗಳಿಂದ ನಾವೆಲ್ಲರೂ ಅನುಗೃಹೀತರಾದೆವು. ನಮ್ಮ ಅಲ್ಪ ಸೇವೆಗೂ ಮಹತ್ತರವಾದ ಫಲವಾಯಿತು.

**ಕೃಷ್ಣ:**—(ರಂಗನಾಥ ದೀಕ್ಷಿತನು ತಂದ ಚಿನ್ನದ ಹರಿವಾಣದಿಂದ ರತ್ನ ಖಚಿತವಾದ ಚಿನ್ನದ ಕಾಲುಕಡಗವನ್ನು ಕೈಗೆ ತೆಗೆದುಕೊಳ್ಳಲನುವಾಗಿ) ಕವಿಪುಂಗವರಿರಾ! ಆಂಧ್ರ ಕವಿತಾ ಪಿತಾಮಹರಾದ ಅಲ್ಲಸಾನಿ ಪೆದ್ದನ್ನನವರಿಗೆ ಈ ಕವಿಗಂಡ ಪೆಂಡೇರವನ್ನು ಸಮರ್ಪಿಸಿ ಧನ್ಯನಾಗಲಿಚ್ಛಿಸುವೆನು. ಅವರನ್ನು ನನ್ನೊಡನೆ ಆನೆಯ ಮೇಲೆ ಮೆರೆವಣಿಗೆ ಮಾಡಿಸಿ ವಿಜಯಮಾಡಿಸಿದುದೇ ಅದಕ್ಕಾಗಿ. ಅವರ ಮನುಚರಿತವೆಂಬ ಗ್ರಂಥರತ್ನಕ್ಕೆ ಪಲ್ಲಕ್ಕಿಯ ಮೆರೆವಣಿಗೆಯಾದುದನ್ನು ತಾವೇ ಬಲ್ಲಿರಿ. ಅವರಿಗೆ ಕೋಕಟಗ್ರಾಮ ಮುಂತಾದ ಅಗ್ರಹಾರಗಳನ್ನು ದಾನವಾಗಿ ಕೊಡಲಿಚ್ಛಿಸುವೆನು.

**ತಿರುಮಲ:**—(ಎದ್ದು ನಿಂತು) ಪ್ರಭುಗಳ ಚಿತ್ತ. ಸಂತೋಷ. ಆದರೂ ಅಲ್ಲಸಾನಿ ಪೆದ್ದನ್ನನವರ ಕವಿತ್ವದಲ್ಲಿ ಸ್ವಭಾವ ಮಧುರೋಕ್ತಿಗಳು ಹೆಚ್ಚಾಗಿಲ್ಲ. ಅತಿಶಯೋಕ್ತಿ ಮುಂತಾದುವು ತುಂಬಿವೆ. ಸ್ವಭಾವ ಮಧುರೋಕ್ತಿಯಿಂದ ತುಂಬಿದ ರಸವತ್ಕಾವ್ಯದ ಕವಿತ್ವಕ್ಕೆ ಈ ಕವಿಗಂಡ ಪೆಂಡೇರವು ಸಲ್ಲಬೇಕು. ಅದೇ ಯುಕ್ತ. ನನ್ನ ಮಾತುಗಳಿಗಾಗಿ....

**ರಾಮಲಿಂಗ:**—(ಎದ್ದು) ನಿಜ, ನಿಜ. ಅದನ್ನು ನನಗೇ ದಯಪಾಲಿಸಬೇಕು. ನಾನು ಈಚೆಗೆ ಕವಿತ್ವಸಂನ್ಯಾಸ ಮಾಡಿದ್ದೆ. ಆದರೂ ಈ ದಿನ ನಮ್ಮ ತಿರುಮಲರಾಯರನ್ನೇ ಬಣ್ಣಿಸಿ, ಸ್ವಭಾವಮಧುರವಾಗಿ ಇದ್ದುದನ್ನು ಇದ್ದಂತೆಯೇ ಅರಿಕೆ ಮಾಡುತ್ತೇನೆ. ಆದಕಾರಣ ಕವಿಗಂಡ ಪೆಂಡೇರವು ನನ್ನ ಕವಿತೆಗೆ ಅರ್ಪಣೆಯಾಗಬೇಕು.

ಅನ್ನಾತಿ ಗೂಡ ಹರುಡಗು
ನನ್ನಾತಿನಿ ಗೂಡಕುನ್ನ ನಸುರಗುರುಂಡೌ ।
ನನ್ನಾ ! ತಿರುಮಲರಾಯುಡು
ಕನ್ನೊಕ್ಕಟ ಲೇದುಗಾನಿ ಕಾಮುಡುಗಾಡೇ ॥

**ಕೃಷ್ಣ**:—ಏನಿದು ? ಈ ಕವಿತ್ವ ಹೀಗಿದೆ ? ಹೆಂಡತಿಯೊಡನಿದ್ದರೆ ಹರ. . ಹೆಂಡತಿಯೊಡನಿಲ್ಲದಿರೆ ಅಸುರ ಗುರು. . . . ಹಾಗೆಂದರೆ ?

**ರಾಮ**:—ಲಾಲಿಸಬೇಕು. ನಮ್ಮ ತಿರುಮಲರಾಯರಿಗೆ ಒಂದೇ ಕಣ್ಣು. ಆದುದರಿಂದ ಅವರು ಹೆಂಡತಿಯೊಡನೆ ನಿಂತಾಗ, ಇವರ ಒಂದು ಕಣ್ಣು, ಅವರ ಎರಡು ಕಣ್ಣುಗಳೂ ಸೇರಿದರೆ ಇವರಿಗೆ ಹರನಂತೆ ಮೂರು ಕಣ್ಣುಗಳು. ಇವರು ಒಬ್ಬರೇ ಇದ್ದಾಗ ಅಸುರ ಗುರುಗಳಾದ ಶುಕ್ರಾಚಾರ್ಯರಂತೆ ಒಂದೇ ಕಣ್ಣು. ಕಣ್ಣೊಂದಿಲ್ಲ. ಉಳಿದ ಲಕ್ಷಣಗಳಲ್ಲಿ ಇವರು ಮನ್ಮಥಸಮಾನರೇ ಅಲ್ಲವೇ—ಎಂದೆ. (ಮತ್ತೆ ಪದ್ಯವನ್ನು ಹಾಡಿ) ಪಾಪ ! ಪಾಪ ! ಅಲ್ಲಸಾನಿ ಪೆದ್ದನ್ನನವರಿಗೆ ಹೀಗೆ ಸ್ವಭಾವೋಕ್ತಿ ಮಧುರ ಕವಿತೆ ಬಾರದು. (ಎಲ್ಲರೂ ಘೊಳ್ಳನೆ ನಗುವರು) ಕವಿಗಂಡ ಪೆಂಡೇರವು ನನಗೇ ಸಲ್ಲಬೇಕು. (ಎಲ್ಲರೂ ನಗುವರು)

**ಭಟ್ಟಮೂರ್ತಿ**:—ನಾನು ನಿನ್ನೆಯ ದಿನ ಮಾಡಿದ ಅರ್ಥಸಮನ್ವಯ ಒಂದನ್ನು ನಮ್ಮ ಗುರುಗಳಾದ ಅಲ್ಲಸಾನಿ ಪೆದ್ದನ್ನನವರೇ ಅಭಿನಂದಿಸಿ, ತಮಗೇ ಅದು ತೋರಲಿಲ್ಲವೆಂದು ಒಪ್ಪಿಕೊಂಡರು. ಅವರು ಸೋತಂತಾಯಿತು. ಕವಿಗಂಡ ಪೆಂಡೇರವು ನನಗೆ ಸಲ್ಲಬೇಕು.

**ರಾಮ**:—(ಎದ್ದು ನಗುತ್ತಾ) ನಿಜ, ನಿಜ. ಕವಿಗಂಡ ಪೆಂಡೇರಕ್ಕೆ ನೀವೇ ಪಾತ್ರರು. (ವ್ಯಂಗ್ಯವಾಗಿ) ಗುರುಗಳನ್ನು ಮೀರಿಸಿದವರಲ್ಲವೇ ನೀವು ? ಅಲ್ಲಸಾನಿ ಪೆದ್ದನ್ನನವರ ಕವಿತೆಯ ಸೊಬಗು, ಮುಕ್ಕು ತಿಮ್ಮಯ್ಯ ಕವಿಗಳ ಮುದ್ದು ತುಂಬಿರುವ ನವಿಮಾತುಗಳು, ಪಾಂಡುರಂಗ ಮಾಹಾತ್ಮ್ಯವನ್ನು ಬರೆದ ಪ್ರಭುಗಳ ಪದಗುಂಫನ ಸಾಮರ್ಥ್ಯ–ಇವುಗಳೇ ನಖಶಿಖಾಂತವಾಗಿ ತಮ್ಮಲ್ಲಿ ತುಂಬಿವೆ.

**ಭಟ್ಟಮೂರ್ತಿ**:—(ನಿಂತು) ಪಾಂಡುರಂಗ ಮಾಹಾತ್ಮ್ಯವನ್ನು ಬರೆದ

ವರು ತಾವೇ ಅಲ್ಲವೆ? ತಮ್ಮನ್ನು ತಾವೇ 'ಪಾಂಡುರಂಗ ಮಾಹಾತ್ಮ್ಯ ವನ್ನು ಒರೆದ ಪ್ರಭುಗಳೆಂ'ದು ಶ್ಲಾಘಿಸಿಕೊಳ್ಳುತ್ತಿದ್ದೀರಿ. (ನಗುವನು)

**ರಾಮ:**—(ಎದ್ದು ನಗುತ್ತ) ಕೊಂಚ ಶ್ಲಾಘಿಸಿಕೊಳ್ಳೋಣವೆಂದು ನೋಡಿದೆ. ಆದರೆ ಗುರುಗಳನ್ನೇ ಹಳಿದವನ ಆತ್ಮಶ್ಲಾಘನೆಯು ಮುಂದೆ ನನ್ನ ಪ್ರಯತ್ನವೇನು ನಡೆದೀತು ಹೇಳಿ? ಆದಕ್ಕೇ ಸುಮ್ಮನಾದೆ. ಹೋಗಲಿ. ಕವಿಯೆಂತ ಹೆಸರು ಬರಬಹುದು. ಆದರೆ ಆ ಮಹಾತಾಯಿ, ಸರಸ್ವತೀ ದೇವಿಯೇ ಆಸ್ವಾದಿಸುವ ಹೃದಯದಿಂದ ಬರುವ ಕವಿತ್ವವೂ ಕವಿತ್ವವೇ! ತಿಸಿಕಿ ತಿಸಿಕಿ ಹೊಸೆಯುವ ಕವಿತ್ವವೂ ಕವಿತ್ವವೇ! ಆಂಧ್ರ ಕವಿತಾಪಿತಾ ಮಹರೆಂದು ಹೆಸರುಪಡೆದಿರುವ ಅಲ್ಲಸಾನಿ ಪೆದ್ದನ್ನನವರೂ ಕವಿಯೇ. ನಾನೂ ಕವಿಯೇ! ಕವಿಯೆಂಬ ಹೆಸರಿರುವ ಸೀರುಕಾಗೆಯೂ ಕವಿಯೇ! ಅಲ್ಲವೇ? ಸೀರುಕಾಗೆಗೂ ಕವಿಯೆಂಬ ಹೆಸರಿದೆ. ಕವಿಗಂಡ ಪೆಂಡೇರವು ಆದಕ್ಕೆ ತಾನೆ ದೊರೆಯಬೇಕು. ಆದರ ಕಾಲಿಗೇ ಕವಿಗಂಡ ಪೆಂಡೇರವನ್ನು ತೊಡಿಸಿದರಾಯಿತು.

[ಅಲ್ಲಸಾನಿ ಪೆದ್ದನ್ನನು ಹರ್ಷವನ್ನು ಸೂಚಿಸುವನು. ಕೃಷ್ಣದೇವರಾಯನ ಹೊರತು ಎಲ್ಲರೂ ನಗುವರು.]

**ಕೃಷ್ಣ:**—(ಕವಿಗಂಡ ಪೆಂಡೇರವನ್ನು ಕೈಗೆ ತೆಗೆದುಕೊಂಡು ಅದನ್ನು ಕಣ್ಣಿಗೆ ಒತ್ತಿಕೊಂಡು, ಜ್ಞಾನವೃದ್ಧ ವಯೋವೃದ್ಧರಾದ ಅಲ್ಲಸಾನಿ ಪೆದ್ದನ್ನನವರಿಗೆ ಪಾದಪೂಜೆಮಾಡಿ ಓಲಗವಾಗುತ್ತಿರುವಲ್ಲಿ ಅದನ್ನು ಅವರ ಕಾಲಿಗೆ ತೊಡಿಸಿ, ನಮಸ್ಕರಿಸಿ) ವಿದ್ಯಾರಣ್ಯ ಮುನೀಂದ್ರ! ಭುವನೇಶ್ವರೀ ಮಾತೆ! ನಿಮ್ಮೀರ್ವರ ಸೇವೆ.

(ಓಲಗವು ನಿಲ್ಲುವುದು)

**ರಾಮ:**—ಜಗದಂಬ! (ಗದ್ಗದ ಧ್ವನಿಯಿಂದ ಕೂಡಿ ಆನಂದಬಾಷ್ಪವನ್ನು ಸುರಿಸುತ್ತ) ಮಹಾನುಭಾವನಾದ ಈ ಪ್ರಭುವೂ ರಸಪರಮೇಷ್ಠಿಯಾದ ಈ ಕವಿಯೂ ಚಿರಕಾಲ ನಿನ್ನ ಕೃಪೆಗೆ ಪಾತ್ರರಾಗುವಂತೆ ಅನುಗ್ರಹಿಸು, ತಾಯೆ!

**ಕೃಷ್ಣ:**—ಅಪ್ಪಾಜಿ, ಇನ್ನು ನಲವತ್ತೆಂಟು ದಿಸಗಳ ಕಾಲ ನಾನು ಅಜ್ಞಾತವಾಸ ಮಾಡುವೆನು. ಅಪ್ಪಳಾಚಾರ್ಯರು ಸಿಂಹಾಸನವನ್ನೇರಿ, ಪ್ರಭುತ್ವ ಮಾಡುವರು. ಅವರಿಗೆ ವಾಗ್ದಾನ ಮಾಡಿದ್ದೇನೆ. ಆ ಅವಧಿ ಕಳೆದ

ಮೇಲೆ ಇತರ ಕಾರ್ಯಗಳನ್ನು ಯೋಚಿಸೋಣ. ಅಲ್ಲಿಯ ವರೆಗೂ ತಾವು ಸುಮ್ಮನಿರಬೇಕು.

**ರಾಮ**:—ಹೌದು, ಹೌದು. ಇಂದಿನಿಂದಲೇ ನಾನು ಮಹಾಪ್ರಧಾನ, ನಮ್ಮ ಅಪ್ಪಳಾಚಾರ್ಯರು ಸಾರ್ವಭೌಮರು. ನಾವಿಬ್ಬರೂ ಸೇರಿ ಪ್ರಭುತ್ವ ಮಾಡುವುದು ಕರ್ಣಾಟಕ ಸಾಮ್ರಾಜ್ಯದ ಪುಣ್ಯ. ಇನ್ನು ಮುಂದೆ ನಾವು ಇಬ್ಬರೂ ಭುವನೇಶ್ವರಿಯ ತಾಟಂಕ ರಕ್ಷಕರು.

**ಅಪ್ಪಾಜಿ**:—ಅವರನ್ನೇಕೆ ಹಾಸ್ಯಮಾಡುವೆ ರಾಮಲಿಂಗಯ್ಯ ?

**ರಾಮ**:—ಹಾಸ್ಯವಲ್ಲ. ಅಪ್ಪಳಾಚಾರ್ಯರು ತಮ್ಮ ಪ್ರಚಂಡ ಬುದ್ಧಿ ಶಕ್ತಿಯನ್ನುಪಯೋಗಿಸಿದ್ದಾರೆ. ಬಹಳ ಯುಕ್ತಿ ಮಾಡಿ ನಲವತ್ತೆಂಟು ದಿನಗಳ ಕಾಲ ಸಿಂಹಾಸನವನ್ನು ತಮಗೆ ಬಿಟ್ಟುಕೊಡುವಂತೆ ಸಾರ್ವಭೌಮರನ್ನು ಒಪ್ಪಿಸಿದ್ದಾರೆ. ಅಪ್ಪಳಾಚಾರ್ಯರು ನಲವತ್ತೆಂಟು ದಿನಗಳ ಕಾಲ ಪ್ರಭುತ್ವ ಮಾಡಲು ಸಪ್ತಾಂಗಗಳನ್ನೂ ಕೇಳಿದ್ದಾರೆ.

**ಅಪ್ಪಾಜಿ**:—ಅಪ್ಪಳಾಚಾರ್ಯರೆ, ಇದೆಲ್ಲಾ ನಿಜವೆ ?

**ಅಪ್ಪಳ**:—(ಸಂತೋಷದಿಂದ ಉಬ್ಬಿ ನಗುತ್ತ) ನಿಜ, ನಿಜ. ಸಾರ್ವಭೌಮರ ಅನುಗ್ರಹ.

**ರಾಮ**:—ಅಪ್ಪಳಾಚಾರ್ಯರಿಗೆ ಸಾರ್ವಭೌಮರ ಅನುಗ್ರಹವಾಗಿ ಸಪ್ತಾಂಗಗಳು ದೊರೆಯುತ್ತವೆ. ಅವುಗಳಲ್ಲಿ ಎರಡು ಅಂಗಗಳನ್ನು ನನಗೆ ಅನುಗ್ರಹ ಮಾಡುವುದಾಗಿ ಭಾಗವತಶ್ರೇಷ್ಠರಾದ ಅಪ್ಪಳಾಚಾರ್ಯರು ಒಪ್ಪಿ ಅನುಗ್ರಹ ಮಾಡಿದ್ದಾರೆ. ಹಾಗೆ ಅವರನ್ನೊಪ್ಪಿಸಲು ಬಹಳ ನೈಚ್ಯಾನುಸಂಧಾನ ಮಾಡಿ ಅವರ ದಯಕ್ಕೆ ಪಾತ್ರನಾದೆ.

**ಅಪ್ಪಾಜಿ**:—ವಿಚಿತ್ರವಾಗಿದೆ. . . . ನಿಜವೆ ? ಅಪ್ಪಳಾಚಾರ್ಯರೆ ?

**ಅಪ್ಪಳ**:—ನಿಜ. ಸಪ್ತಾಂಗಗಳಲ್ಲೆರಡನ್ನು ಕೊಡುವುದಾಗಿ ಒಪ್ಪಿದ್ದೇನೆ. ಅವರು ಮಹಾಪ್ರಧಾನರಾಗುವಂತೆಯೂ ಇದೆಯಲ್ಲಾ !

**ಅಪ್ಪಾಜಿ**:—ಅಪ್ಪಳಾಚಾರ್ಯರೆ ! ಸಪ್ತಾಂಗಗಳನ್ನೂ ನಲವತ್ತೆಂಟು ದಿನಗಳ ಕಾಲ ತಮಗೊಪ್ಪಿಸುವುದಾಗಿ ವಾಗ್ದಾನವು ನಡೆಯಿತಷ್ಟೆ ? ಮೊದಲೇ ಈ ವಿಷಯವನ್ನು ತಿಳಿಸಿ ವಾಗ್ದಾನವನ್ನು ಪಡೆದಿರಾ ?

**ಅಪ್ಪಳ**:—ಇಲ್ಲ. ಮೊದಲು ಮನೋರಥವನ್ನು ಸಲ್ಲಿಸಬೇಕೆಂದು

ಮಾತ್ರ ಕೇಳಿದೆ. ವಾಗ್ದಾನವಾದ ಮೇಲೆ ಸಪ್ತಾಂಗಗಳನ್ನು ಬೇಡಿದೆ.

**ರಾಮು:**—ಆ ಸಪ್ತಾಂಗಗಳಲ್ಲಿ ಎರಡನ್ನು ನನಗೆ ಕೊಡುವಿರಿ ತಾನೆ?

**ಅಪ್ಪಳ:**—ಆಹ! ಕೊಡುತ್ತೇನೆ. ನನ್ನ ವಾಗ್ದಾನಕ್ಕೆ ಚ್ಯುತಿಯುಂಟೆ?

**ರಾಮು:**—(ನಕ್ಕು) ದಾನಶೂರರು ಅಪ್ಪಳಾಚಾರ್ಯರು! ಸಪ್ತಾಂಗಗಳಲ್ಲಿ ಎರಡು ನನಗಾದರೆ ತಮಗುಳಿದುದು ಪಂಚಾಂಗ. (ಹೊದೆದಿರುವ ಶಾಲನ್ನು ಓರೆ ಮಾಡಿ ಕಂಕುಳಿನಿಂದ ಒಂದು ಬಟ್ಟೆಯ ಗಂಟನ್ನು ತೆಗೆದು) ಅಪ್ಪಳಾಚಾರ್ಯರೇ, ಅಪ್ಪಳಾಚಾರ್ಯರೇ, ಇದರಲ್ಲಿ ನಲವತ್ತೆಂಟು ಪಂಚಾಂಗಗಳಿವೆ. ಒಪ್ಪಿಸಿ ಕೊಳ್ಳಬೇಕು. ಅಪ್ಪಳಾಚಾರ್ಯರಿಗೆ ಪಂಚಾಂಗ ಒಪ್ಪಿಸಲು ಸಭಿಕರ ಮತ್ತು ಸಾರ್ವಭೌಮರ ಅಪ್ಪಣೆಯಾಗಬೇಕು. (ಎಲ್ಲರೂ ನಗುವರು) ನಲವತ್ತೆಂಟು ದಿನಗಳಲ್ಲಿ ಪ್ರತಿಯೊಂದು ದಿನಕ್ಕೂ ಒಂದೊಂದು ಪಂಚಾಂಗ. ರಾಜ ಪುರೋಹಿತ ಅಪ್ಪಳಾಚಾರ್ಯರಿಗೆ ನಲವತ್ತೆಂಟು ಪಂಚಾಂಗಗಳು

**ಅಪ್ಪಳ:**—ನನ್ನ ಮನೋರಥಸಿದ್ಧಿಯ ಕಾಲದಲ್ಲಿ ಅಪಹಾಸ್ಯವೆ?

**ರಾಮು:**—ನಿಮ್ಮ ಮನೋರಥದ ಚಕ್ರ ಹಳ್ಳಕ್ಕೆ ಉರುಳಿ ಹೋಯಿತು. ಕೇಳುವುದರಲ್ಲಿಯೂ ಕೂಡ ಕೊಂಚ ವಿಚಕ್ಷಣೆ ಬೇಡವೆ? ವಿವೇಚನೆ ಬೇಡವೆ? ಧರ್ಮಶಾಸ್ತ್ರದ ಪ್ರಕಾರ ರಾಜ್ಯವನ್ನು ದಾನವಾಗಿ ಕೊಡಲು ರಾಜನಿಗೇ ಅಧಿಕಾರವಿಲ್ಲ. ಸಪ್ತಾಂಗಗಳ ಅರ್ಥವಾಗಲಿ, ಆಶಯವಾಗಲಿ, ತಮಗೆ ಗೊತ್ತೆ? ನನಗೆರಡು ಕೊಟ್ಟು ತಮಗೆ ಪಂಚಾಂಗ ಉಳಿಸಿಕೊಳ್ಳು ತ್ತಾರಂತೆ (ನಗುತ್ತ) ನಿಮಗೆ ಪಂಚಾಂಗವೇ ಶಾಶ್ವತವಾಗಿರಲಿ, ನಮ್ಮಪ್ಪ. ೪೮ ದಿನಗಳು ಮಾತ್ರವೇಕೆ? ಶಾಶ್ವತವಾಗಿಯೇ ಇರಲಿ. ಆ ಪಂಚಾಂಗ ಬೇಕೋ, ಈ ಪಂಚಾಂಗ ಬೇಕೋ? (ಎಲ್ಲರೂ ನಗುವರು) ಆ ಮಹಾನು ಭಾವರು ವ್ಯಾಸರಾಯರು ಸಾರ್ವಭೌಮರ ವಿಪತ್ತನ್ನು ಪರಿಹರಿಸಲು ಕುಹುಯೋಗದಲ್ಲಿ ಸಿಂಹಾಸನವನ್ನೇರಿ ಅನುಗ್ರಹಿಸಿದರು. ಹುಲಿ ನೋಡಿ ನರಿ ಬರೆ ಹಾಕಿಕೊಂಡಂತೆ ನಮ್ಮ ಅಪ್ಪಳಾಚಾರ್ಯರು ಈ ಕುಹಕಯೋಗ ವನ್ನಾರಂಭಿಸಿದರು.

**ಅಪ್ಪಾಜಿ:**—ನೀನು ಧರ್ಮಸಚಿವನಾಗಿದ್ದು ರಾಜ್ಯವನ್ನುಳಿಸಿದೆ. ಇನ್ನು ಅವರು ಕೇಳುವುದಿಲ್ಲ. ಬಿಟ್ಟುಬಿಡು ರಾಮಲಿಂಗಯ್ಯ.

**ಕೃಷ್ಣ:**—ನಾನು ಕೊಟ್ಟ ಭಾಷೆಗೆ ತಪ್ಪಲಾರೆ. ಅದು ಖಂಡಿತ.

ರಾಮ:— ಅಪ್ಪಳಾಚಾರ್ಯರೇ, ಪ್ರಭುಪದವಿಗೂ, ಮಂತ್ರಿಪದವಿಗೂ ಎಲ್ಲರೂ ಅರ್ಹರಲ್ಲ. ನನ್ನ ಮಾತು ಕೇಳಿ. ತ್ಯಾಗರಾಜರಾಗಿರುವ ಅಪ್ಪಾಜಿ, ಪ್ರಜೆಗಳ ಕ್ಷೇಮಕ್ಕಾಗಿ ಗುಂಡಿಗೆಯ ಬಿಸಿರಕ್ತವನ್ನು ಒಸಿಯುವುದಕ್ಕೂ ಸಿದ್ಧವಾಗಿರುವ ಪ್ರಚಂಡವಿಕ್ರಮ ಕೃಷ್ಣದೇವರಾಯ ಸಾರ್ವಭೌಮರು, ಅವರೀರ್ವರೂ ಭುವನೇಶ್ವರೀ ಮಾತೆಯ ಎರಡು ಕಣ್ಣುಗಳಂತಿದ್ದಾರೆ. ಅವರು ಸಾಮ್ರಾಜ್ಯವನ್ನು ನೋಡಿಕೊಳ್ಳಲಿ.

ಅಪ್ಪಾಜಿ:—(ಎದ್ದು) ಪ್ರತಾಪರುದ್ರ ಗಜಪತಿ ಮಹಾರಾಜರಿಂದ ಪತ್ರಿಕೆ ಬಂದಿದೆ. ಇನ್ನು ಮುಂದೆ, ಸಾರ್ವಭೌಮರು 'ಗಜಪತಿರಾಯೇಭ ಗಂಡಭೇರುಂಡ'—ಎಂಬ ಬಿರುದನ್ನು ಬಿಟ್ಟುಬಿಡಬೇಕಂತೆ.

ಕೃಷ್ಣ:—ಹಂ! ಹಾಗೆಯೆ? ತಾವೇನನ್ನು ಹೇಳುವಿರಿ ಅಪ್ಪಾಜಿ?

ಅಪ್ಪಾಜಿ:—ಅದು ಅವರ ಪ್ರಾರ್ಥನೆ, ಮಹಾಸ್ವಾಮಿ. ತೀರ್ಮಾನವೇನೊ ಮಹಾಪ್ರಭುಗಳಿಗೆ ಸೇರಿದೆ.

ಕೃಷ್ಣ:—ಇನ್ನು ಸ್ವಲ್ಪ ಕಾಲಕ್ಕೆ ಉದಯಗಿರಿಯ ಜೈತ್ರಯಾತ್ರೆ. ಸೋಲೇನಾದರೂ ಸಂಘಟಿಸಿದರೆ ಆಗ್ಗೆ ಆ ಬಿರುದನ್ನು ಬಿಡುವ ಮಾತು. ಈಗೇಕೆ ಅದರ ಸುದ್ದಿ?

(ತೆರೆ ಬೀಳುವುದು. ಮತ್ತೆ ಅದು ಮೇಲಕ್ಕೇಳುವ ಕಾಲಕ್ಕೆ ರಂಗಸ್ಥಳವು ಬರಿದಾಗಿರುವುದು. ಖಡ್ಗಹಸ್ತೆಯಾದ ಚಿನ್ನಾದೇವಿಯೂ ಅವಳ ಹೆಗಲ ಮೇಲೆ ಕೈಹಾಕಿಕೊಂಡು ತಿರುಮಲದೇವಿಯೂ ಪ್ರವೇಶಿಸುವರು.)

ಚಿನ್ನಾ:—ಅಕ್ಕ! ಆರ್ಯಪುತ್ರನೂ ಆ ಕೃಷ್ಣಾಸಾನಿಯೂ ಈ ಮಾರ್ಗವಾಗಿಯೇ ಬರಬಹುದು. ಧೂರ್ತೆಯಾದ ಆ ಕುಲಟೆಯನ್ನು ಈ ಖಡ್ಗದಿಂದ ತುಂಡುತುಂಡಾಗಿ ಕತ್ತರಿಸುವೆನು. ಆರ್ಯಪುತ್ರನೂ ನೋಡಿ ಹಿಗ್ಗಲಿ.

ತಿರು:— ಶಾಂತಳಾಗು ಚಿನ್ನಾ. ನಾಳೆ ಹೇಗೂ ಉದಯಗಿರಿಗೆ ವಿಜಯಪ್ರಯಾಣ. ನಮ್ಮಿಬ್ಬರ ಶಕ್ತಿ ಸಾಮರ್ಥ್ಯಗಳನ್ನೂ ಆರ್ಯಪುತ್ರನೊಡನೆ ರಣರಂಗದಲ್ಲಿ ಶತ್ರುಗಳ ಮೇಲೆ ಪ್ರಯೋಗಿಸಿ ಕಾಳಗ ಮಾಡೋಣ. ಈ ಹೊಸಬಳ ಮೇಲೆ ನಿನ್ನ ಶಸ್ತ್ರ ಚಾಲನವೆ?

ಚಿನ್ನಾ:—(ನಮಸ್ಕರಿಸಿ) ನೀವು ನನ್ನನ್ನು ಮನ್ನಿಸಬೇಕು. ಕೋಪದಿಂದ ಬುದ್ಧಿಯೇ ಶೂನ್ಯವಾಗಿದೆ.

ತಿರು:— (ಆದರದಿಂದ ಚಿನ್ನಾ ಸವರಿ) ನನ್ನ ಹುಚ್ಚು ತಂಗಿ! (ಖಡ್ಗವನ್ನು ಚಿನ್ನಾದೇವಿಯ ಕೈಯಿಂದ ತೆಗೆದುಕೊಂಡು) ಇದು ನನ್ನಲ್ಲಿರಲಿ.

ಚಿನ್ನಾ:—(ವ್ಯಂಗ್ಯವಾಗಿ) 'ಕೃಷ್ಣಾ! ಎಂತಹ ಭುವನಮೋಹನರೂಪವೆ ನಿನ್ನದು! ನಿನ್ನಂತೆ ನನ್ನನ್ನು ಮತ್ತಾರೂ ಪ್ರೀತಿಸಿರಲಿಲ್ಲ. ನಾನು ಇಂದು ಪೂರ್ಣ ಸುಖಿ ಕೃಷ್ಣಾ!'—ಹಾಗೆ ಆ ಹೊಸ ಕುಲಟಿಯೊಡನೆ ಆರ್ಯಪುತ್ರನು ಹೇಳಿದರಂತೆ. ಹೇಳಬಹುದೆ?

ತಿರು:—ಅದೇಕೆ? ಚಿನ್ನಾ! ಆರ್ಯಪುತ್ರನನ್ನು ಹೀಗೆ ಅಣಕಿಸುವೆ?

ಚಿನ್ನಾ:— ಇನ್ನೆಲ್ಲಿಯ ಆರ್ಯಪುತ್ರ? ನನ್ನ ಮೈ ಉರಿಯುತ್ತಿದೆ. ಅಕ್ಕಾ! ಆರ್ಯಪುತ್ರನು ನನ್ನನ್ನೂ ಹೀಗೆಯೇ ಪ್ರೀತಿಸಿ, ನನಗೂ ಇದೇ ಮಾತುಗಳನ್ನು ಹೇಳಿದ್ದರಕ್ಕಾ. (ಅಳುವಳು)

ತಿರು:—ಸಮಾಧಾನ ಹೊಂದು. ಚಿನ್ನಾ, ಜೀವನದಲ್ಲಿ ಬೇವು ಬೆಲ್ಲ ಗಳೆರಡೂ ಉಂಟು. ತಂಗಿ, ನೀನು ತುಂಬ ಒಳ್ಳೆಯವಳು. ನೀನೇ ತಾಳ್ಮೆ ಗೆಟ್ಟರೆ ಹೇಗಮ್ಮ?

ರಾಮು:—(ಪ್ರವೇಶಿಸಿ) ನಮ್ಮ ಕರ್ಣಾಟಕ ಸಾಮ್ರಾಜ್ಯ ಮಾರಮಣರ ಭೂನೀಳಾದೇವಿಯರು ರಣರಂಗಕ್ಕೆ ಹೋಗಲು ಈಗಲೇ ಸಿದ್ಧರಾದಂತಿದೆ.

ಚಿನ್ನಾ:—(ವ್ಯಾಘ್ರಿಣಿಯಂತೆ ರೋಷದಿಂದ ಸೆಡೆದು ನಿಂತು) ಕರ್ಣಾಟಕ ಸಾಮ್ರಾಜ್ಯದ ಮಾರಮಣ. ಕೃಷ್ಣಾನಾನಿಯು ಮಾದೇವಿಯೋ ಹಾಗಾ ದರೆ?

ರಾಮು:—(ನಕ್ಕು) ನನ್ನ ಮೇಲೆ ರೇಗಿದರೆ ನಾನೇನು ಮಾಡಲಿ ತಾಯಿ?

ಚಿನ್ನಾ:— ಮಾಡುವುದೇನು? ಸಾರ್ವಭೌಮರ ಪ್ರಣಯಲೀಲೆಗೆ ಸಹಾಯಮಾಡುವುದು. ಅವರ ಮನಸ್ಸು ಹೀಗಾದುದು ನಿಮ್ಮಂಥವರಿಂ ದಲೇ.

ರಾಮು:—(ನಗುತ್ತ) ನಾನು ಅಷ್ಟು ಕೆಟ್ಟ ಹುಳುವಲ್ಲ.

ಚಿನ್ನಾ:—ಹಾಗಾದರೆ ಈಗ ತಮ್ಮ ಸವಾರಿ ಚಿತ್ತೈಸಿದ ಬಗೆ ಹೇಗೊ?

ರಾಮು:—ನಮ್ಮ ಸವಾರಿ ಚಿತ್ತೈಸಿದ ಬಗೆಯೆ? ಅದು ಹೀಗೆ. ಉದಯ ಗಿರಿಯ ಮುತ್ತಿಗೆಗೆ ತಾವೆಲ್ಲರೂ ಬಿಜಯಮಾಡಿದಾಗ ಈ ಸಲ ಲಕ್ಷ ಜಪ

ಹೋಮವನ್ನು ನನ್ನ ಹಣದಿಂದ ನಾನು ಮಾಡಿಸುವುದಾಗಿ ಅರಕೆ ಮಾಡು ವುದೊಂದು. ಸಾರ್ವಭೌಮರು ಉದಯಗಿರಿ ಮುತ್ತಿಗೆಯ ಪ್ರಯತ್ನವನ್ನು ಹೂಡುತ್ತಿರುವಾಗಲೇ, ಕೊಂಡವೀಡು ಕೊಂಡಪಲ್ಲಿಗಳ ಕೋಟೆಗಳೂ ಕಟ ಕದ ವರೆಗಿನ ಸೀಮೆಯೂ ತಮಗೇ ಸೇರಿಹೋಯಿತೆಂದು ಪ್ರಜೆಗಳು ಉತ್ಸಾಹಪಡುತ್ತಿದ್ದಾರೆ. ಅಗಸರು, ನಾಯಿಂದರು ಮೊದಲಾದ ಸಾಮಾನ್ಯ ಜನರು ಕೂಡ—

**ಕೊಂಡವೀಡು ಮಾದೇರಾ, ಕೊಂಡಪಲ್ಲಿ ಮಾದೇರಾ ।**
**ಕಾದನಿ ಯೆವಡು ವಾಡವಚ್ಚಿನ ಕಟಕಂದಾಗಾ ಮಂದೇರಾ ॥**

ಎಂದು ಹಾಡಿ ಹಿಗ್ಗುತ್ತಿದ್ದಾರೆ—ಎಂದು ಬಿನ್ನೈಸುವುದೊಂದು. ಇವೆರಡು ಕೆಲಸಗಳಿಗಾಗಿ ನಮ್ಮ ಸವಾರಿ ಇಲ್ಲಿಗೆ ಚಿತ್ತೈಸಬೇಕಾಯಿತು. ಮೂರ ನೆಯ ಮಹಾದೇವಿಯವರ ಮೇಲೆ ಎರಡನೆಯ ಮಹಾದೇವಿಯವರು ರೇಗು ತ್ತಿದ್ದಾರೆ.

**ಚಿನ್ನಾ**:—ಮೂರನೆಯ ಮಹಾದೇವಿಯಂತೆ? ನಮ್ಮೆದುರಿಗೇ ಈ ಮಾತು!

**ರಾಮು**:—ಕೃಷ್ಣದೇವರಾಯರು ನಿಮ್ಮನ್ನು ಓಲೈಸಿದ ತರುಣದಲ್ಲಿ ತಿರುಮಲದೇವಿಯವರು-ಇವರು-ನಿಮ್ಮ ಅಕ್ಕನವರು-ಇವರೂ ಹೀಗೆಯೇ ರೇಗುತ್ತಿದ್ದರೋ—ಇಲ್ಲವೋ—ಹೇಗಿದ್ದರೋ ಎಂತ ಈಗ ನನ್ನ ಯೋಚನೆ!

**ಚಿನ್ನಾ**:—ಹಾಗಾದರೆ ನಾವಿಬ್ಬರೂ ನೂತನ ದಂಪತಿಗಳಿಗೆ ಆರತಿ ಬೆಳಗಬೇಕೇನು?

**ರಾಮು**:—ಯಾರ ಹಣೆಯಲ್ಲಿ ಏನು ಬರೆದಿದೆಯೊ, ಆ ತಾಯೇ ಬಲ್ಲಳು. ನಿಮಗೊದಗಿರುವ ಈ ದುಃಖ ನಿಮಗೆ ಹೊಸದು. ನಿಮ್ಮ ಅಕ್ಕನವರಿಗೆ ಹಳೆ ಯದು. ಅವರಂತೆ ಸಹನವನ್ನು ಕಲಿತುಕೊಂಡರೆ ನಿಮ್ಮ ಸಮಾನವಿಲ್ಲ.

**ಚಿನ್ನಾ**:—ನಿನ್ನ ನಾಲಗೆಯನ್ನು ಸೀಳಲೇ ಎನ್ನಿಸುತ್ತದೆ.

**ರಾಮು**: —ನನ್ನ ನಾಲಗೆಯನ್ನು ಸೀಳಿದರೆ ನಿಮಗಾಗಿರುವ ಅನ್ಯಾಯ ಹೋದೀತೊ!!

**ಚಿನ್ನಾ**:—(ಅಳುತ್ತಾ) ಅದಕ್ಕೆ ದಾರಿಯುದೆಯೆ, ರಾಮಲಿಂಗಯ್ಯನವರೆ?

**ರಾಮು**:—ನಮ್ಮಿಂದ ಅನುಕೂಲವಾದ ಉತ್ತರವು ಬಂದೊಡನೆಯೇ

ನಾವು ರಾಮಲಿಂಗಯ್ಯನವರು ರಾಮಲಿಂಗಯ್ಯನವರಾದೆವು. (ನಗುತ್ತ) ಅಯ್ಯೋ ಪ್ರಪಂಚವೆ!

**ಚಿನ್ನಾ:**—ತಪ್ಪಿ ಮಾತನಾಡಿದೆ (ಅಳುವಿನ ಮಧ್ಯದಲ್ಲಿ ನಗುವ ಪ್ರಯತ್ನ ಮಾಡಿ) ಕ್ಷಮಿಸಿ. ನಮ್ಮ ಸಂಕಟ ನಿಮಗೆ ತಿಳಿಯದು.

**ರಾಮು:**—ಇರಬಹುದು. ಆದರೂ ನಾನು ನಿಮ್ಮವನು.

**ಚಿನ್ನಾ:**—ಹಾಗಾದರೆ ನಮಗೆ ಸಹಾಯ ಮಾಡಿ.

**ರಾಮು:**—ಸಹಾಯಮಾಡುವ ಬಗೆ?

**ಚಿನ್ನಾ:**—ಅವಳು ತನ್ನ ತವರುಮನೆಗೆ ಹೊರಟು ಹೋಗುತ್ತಾಳೆ. ನೀವು ವೇಷಾಂತರದಿಂದ ಆ ಊರಿಗೆ ಹೋಗಿ, ಅವಳು ಸಾಧ್ವೀರತ್ನವಲ್ಲ ವೆಂದು ಸಾರ್ವಭೌಮರಿಗೆ ತೋರಿಸಿಕೊಡಿ.

**ತಿರು:**—ಇದೇನು ನಿನ್ನ ಹುಚ್ಚು ಮಾತು ಚಿನ್ನಾ?

**ಚಿನ್ನಾ:**—ಅವಳು ಕುಲಟೆಯೆಂದು ಕೇಳಿದ್ದೇನೆ. ಅಕ್ಕ! ನೀವು ಭೂದೇವಿಯಂತೆ ಸ್ಥೈರಣೆಯುಳ್ಳವರು. ನನ್ನಿಂದ ಅದು ಸಾಧ್ಯವಿಲ್ಲ. ಆದರೂ ನಿಮ್ಮಂತಾಗಬೇಕೆಂಬ ಆಶೆಯೇನೋ ಇದೆ, ಅಕ್ಕ!

**ರಾಮು:**—ಅವಳೂ ನಿಮ್ಮಂತೆಯೇ ಅವರಲ್ಲಿ ಭಕ್ತಿಯುಳ್ಳವಳೆಂದು ಕಂಡುಬಂದರೆ? ನನ್ನ ಪ್ರಾಣಕ್ಕೆ ಸಂಚಕಾರ ತರುವ ಈ ಪ್ರಯತ್ನ ಮಾಡಿಯೂ ಹಾಗೆ ಕಂಡು ಬಂದರೆ?

**ತಿರು:**—ಆಗ್ಗೆ ಅವಳು ನನ್ನ ಮೆಚ್ಚಿನ ತಂಗಿಯಾಗುವಳು.

**ಚಿನ್ನಾ:**—ಆರ್ಯಪುತ್ರನ ವರ್ತನೆ ಸರಿಯೆ, ಅಕ್ಕ?

**ರಾಮು:**—ಸಾಮಾನ್ಯರಾದರೆ ಸರಿಯಲ್ಲ. ಸರಿಯಲ್ಲ. ಸರಿಯೆನ್ನುವರಾರು? ಚಕ್ರವರ್ತಿಗಳು ಏನನ್ನು ಮಾಡಿದರೂ ಸರಿಯೆ, ಕೇಳುವವರಾರು? ಧರ್ಮಸಚಿವನ ಮಾತಿಗೂ ಬೆಲೆಯಿಲ್ಲ. ಇರಲಿ. ಜಗನ್ಮಾತೆಯ ದಯದಿಂದ ನಾನೂ ದಾಳವನ್ನುರುಳಿಸುತ್ತೇನೆ.

(ತೆರೆ ಬೀಳುವುದು)

—

## ದೃಶ್ಯ ೨

[ ತೆನಾಲಿ ರಾಮಲಿಂಗಯ್ಯನ ಮನೆಯ ಹಜಾರ. ಗೋಡೆಯ ಮೇಲೆ ಭುವನೇಶ್ವರೀ ದೇವಿಯ ಚಿತ್ರಪಟವೂ, ವಿದ್ಯಾರಣ್ಯ ಸ್ವಾಮಿಗಳ ಚಿತ್ರಪಟವೂ, ವ್ಯಾಸರಾಯ ಸ್ವಾಮಿಗಳ ಚಿತ್ರಪಟವೂ, ಕೃಷ್ಣ ದೇವರಾಯನ ಚಿತ್ರಪಟವೂ ಒಂದು ದೊಡ್ಡ ಕನ್ನಡಿಯೂ ಇರುವುವು. ನೆಲಕ್ಕೆ ರತ್ನಗಂಬಳಿಗಳನ್ನು ಹಾಸಿ ಲೋಡು ದಿಂಬುಗಳನ್ನಿಟ್ಟಿರುವರು. ಒಂದು ಕಡೆಗೆ ಹಲವು ವ್ಯಾಸಪೀಠಗಳ ಮೇಲೆ ಓಲೆಯ ಗರಿಯ ಪುಸ್ತಕಗಳಿರುವುವು. ರಾಮಲಿಂಗಯ್ಯನು ಹಣೆಗೆ ದೊಡ್ಡದಾಗಿ ಗಂಧಾಕ್ಷತೆಗಳನ್ನಿಟ್ಟುಕೊಂಡು ಒಂದು ಓಲೆಯ ಗರಿಯ ಪುಸ್ತಕವನ್ನು ಹಿಡಿದುಕೊಂಡು ಕುಳಿತಿರುವನು ]

**ರಾಮಲಿಂಗ:**—ಕಮಲಾ! ಕಮಲಾ! ಇಲ್ಲಿ ಬಾ, ಕೊಂಚ.

**ಕಮಲಾ:**—(ಪ್ರವೇಶಿಸಿ ನಗುತ್ತಾ) ಓಹೊ! ಆಗಲೆ ಪುಸ್ತಕ ಕೈಗೆ ಬಂದಿದೆ. ಸಾರ್ವಭೌಮರೂ ಅಪ್ಪಾಜಿಯವರೂ ಸುಖಜೀವನವಾಗುವಂತೆ ಸಂಭಾವನೆಯ ಮೇಲೆ ಸಂಭಾವನೆಯನ್ನು ಕೊಡುತ್ತಿದ್ದಾರೆ. ನಿಮ್ಮ ಪಾಂಡುರಂಗ ಮಹಾತ್ಮ್ಯ ಗ್ರಂಥವನ್ನು ಮೆಚ್ಚಿ ಯಥೇಷ್ಟವಾಗಿ ಹಣ ಕೊಟ್ಟಿದ್ದಾರೆ. ಇನ್ನೂ ಓದಬೇಕೆ?

**ರಾಮ:**—ತಪ್ಪಾಯಿತು, ನೋಡು. ನಾನು ಓದಿದುದು ತಪ್ಪು. ಲಕ್ಷ್ಮೀ ಕೃಪೆ ಕೊಂಚ ಒದಗಿದ ಮೇಲೆ ಸರಸ್ವತಿಯ ಕಡೆಗೇ ನೋಡಬಾರದು. ನಿನ್ನ ಮಾತು ಸರಿ. ಅಲ್ಲವೆ? ಅಲ್ಲವೆ? ಹೇಳು.

**ಕಮಲೆ:**—ನನ್ನ ಹಾಸ್ಯ ಮಾಡಬೇಡಿ. ಇಷ್ಟು ಕವಿತೆ ಹೇಳುತ್ತೀರಿ. ನನ್ನ ಮೇಲೆ ಒಂದು ಕವನ ಮಾಡಬಾರದೆ?

**ರಾಮ:**—ಆಹ! ಆಗಬಹುದು. ಧನಿಕರನ್ನು ಕವಿಗಳು ವರ್ಣಿಸುವಂತೆ ವರ್ಣಿಸಲೆ?

**ಕಮಲೆ:**—ಹಾಗೆಂದರೆ?

**ರಾಮ:**— ಅತಿಶಯೋಕ್ತಿಯ ಸುರಿಮಳೆಯಿಂದ ವರ್ಣಿಸುವುದು. ಹುಳುಕುಗಳನ್ನೆಲ್ಲಾ ಮುಚ್ಚಿ ಇಲ್ಲದ ಗುಣ ಆರೋಪಿಸಿ ಹಾಡುವುದು. ನಿನ್ನ ಮೇಲೆ ಹಾಗೊಂದು ಕವನ ಕೇಳುವೆಯಂತೆ. ನೀನು ನಡೆದರೆ ಮದಗಜ ಗಮನೆ, ನೀನು ಮಾತನಾಡಿದರೆ ವೀಣಾಕಲಕಂಠಕಲರವ, ನೀನು ಸಕ್ಕರೆ ಮಲ್ಲಿಕಾಹೀರ ಚಂದ್ರಿಕಾಧವಳಿಮಾ, ನೀನು ನೋಡಿದರೆ ಪುಷ್ಪಬಾಣಗಳು,

ನಿನ್ನ ನೋಡಿ ರತಿದೇವಿಯೂ ನಾಚುವಳು—ಇಷ್ಟು ಸೇರಿಸಿ ಬಣ್ಣಿಸಿದರೆ ಸಾಕು ತಾನೆ? ಹೇಳು ಕಮಲಾ!

**ಕಮಲೆ:**—(ಕನ್ನಡಿ ನೋಡಿಕೊಂಡು) ನಿಜ. ನಿಜ. ಹಾಗೆಯೇ ಇದೆ, ನನ್ನ ರೂಪು. ನಡೆದರೆ ಮದಗಜಗಮನ, ಅದನ್ನು ನೀವು ಹೇಳಬೇಕು; ಸರಿ, ಹೇಳಿದ್ದೀರಿ. ಮಾತನಾಡಿದರೆ ವೀಣಾಕಲಕಂಠಕಲರವ. ನಿಜ, ಸೊಗಸಾಗಿದೆ ನನ್ನ ಧ್ವನಿ. ನಕ್ಕರಂತೂ ಮಲ್ಲಿಕಾಹೀರ ಚಂದ್ರಿಕಾಧವಳಿಮಾ. ನಾನು ನೋಡಿದರೆ ಪುಷ್ಪಬಾಣ. ಅದೂ ನೀವೇ ಹೇಳಬೇಕು; ಹೇಳಿದ್ದೀರಿ. ರತಿಯೆಂದಿರಿ. ನಿಜ. ರತಿಯಂತೆಯೇ ಇರಬಹುದು. ಆದರೆ ನೀವೂ ರತಿಯನ್ನು ನೋಡಿಲ್ಲ. ನಾನೂ ನೋಡಿಲ್ಲ. ಅಯ್ಯೋ! ಸುಳ್ಳಿನ ಕಂತೆಯೆ. (ನಗುವಳು) ಕವಿಯ ನಾಲಗೆ ಸುಳ್ಳಿನ ಸೆಲೆ. (ನಗುವಳು)

**ರಾಮು:**—ಸುಳ್ಳು ಹುಟ್ಟಿದುದೇ ಕವಿಗಳ ನಾಲಗೆಯಿಂದ. ಅದು ಬೆಳೆದಿರುವುದು ಮಾತ್ರ ನಿನ್ನಂತಹ ಹೆಂಗಸರಿಂದ.

**ಕಮಲೆ:**—ಮಿತಿಯಿಲ್ಲದೆ ಅನ್ನದಾನ ಮಾಡಿದಿರಿ. ವರ್ತಕರೆಲ್ಲ ಈ ದಿನ ಮತ್ತೆ ಹಣಕ್ಕೆ ಬರುತ್ತಾರೆ. ಸಾಲ ಹೇಗೆ ತೀರಿಸುತ್ತೀರಿ?

**ರಾಮು:**—ತೀರಿಸುವ ಭಾರ ಜಗನ್ಮಾತೆಯದು. ಆ ತಾಯಿ ಬಲ್ಲಳು.

**ಕಮಲೆ:**—ತಾಯಿ....ತಂದೆ....ಚೆನ್ನಾಗಿ ಹೇಳುತ್ತೀರಿ. ಅಪ್ಪಾಜಿಯವರಿಗೆ ಒಂದು ಮಾತು ಹೇಳಿದರಾಯಿತು. ಹಣಕ್ಕೇನು ಯೋಚನೆ? ಆದರೆ ಅವರು ಉದಯಗಿರಿಯಿಂದ ಇನ್ನೂ ಬರಲಿಲ್ಲವಲ್ಲಾ!

**ರಾಮು:**—ನಮ್ಮ ಪ್ರಭುವಿಗೆ ಜಯವಾಗಲೆಂದು ಲಕ್ಷ ಜಪ ಹೋಮ ಮಾಡಿಸಿದೆ. ಅದಕ್ಕಾಗಿ ಅಪ್ಪಾಜಿಯವರಿಂದ ಹಣವನ್ನು ಕೇಳಲಾರೆ. ದೂರ ದೇಶಗಳವರು ಕೂಡ ಬಂದು ಭೋಜನ ದಕ್ಷಿಣೆಗಳಿಂದ ಸಂತುಷ್ಟರಾಗಿ ಹೋದರು. ಅಪ್ಪಳಾಚಾರ್ಯರು ಸಾಲ ತೀರಿಸಲು ಸಹಾಯ ಮಾಡುವುದಾಗಿ ಹೇಳಿದ್ದಾರೆ.

**ಕಮಲೆ:**—(ನೇಪಥ್ಯದ ಕಡೆಗೆ ನೋಡಿ) ಅದೋ ಅವರೇ ಬರುತ್ತಿದ್ದಾರೆ. ಸಾಲವೊಂದು ತೀರಿದರೆ, ಆಮೇಲೆ ಯಾವ ಯೋಚನೆಯೂ ಇಲ್ಲ. (ಹೋಗುವಳು)

**ಅಪ್ಪಳಾ:**—(ಪ್ರವೇಶಿಸಿ, ಸ್ವಗತ) ಈ ರಾಮಲಿಂಗಯ್ಯ ಪ್ರಬಲನಾದ.

ನಮ್ಮನ್ನು ಕೇಳುವವರೇ ಇಲ್ಲದಂತಾಯಿತು. ಇದಕ್ಕೆ ತಕ್ಕ ತೇಜೋವಧೆಯ ಉಪಾಯವನ್ನು ಹೂಡಿದ್ದೇನೆ. (ಮುಂದೆ ಬಂದು ಪ್ರಕಾಶ) ರಾಮಲಿಂಗಯ್ಯನವರೆ! ಸಮಯ ಹೇಗಿದೆಯೋ ಏನೋ? ಏನು ವಿಜೃಂಭಣೆಯಿಂದ ಲಕ್ಷ ಜಪ ಹೋಮ ನಡೆಯಿತು! ಏನು ಕಥೆ!

**ರಾಮ:**—ಕೂಡಬೇಕು. ಕೂಡಬೇಕು. ಎಲ್ಲಾ ಆ ತಾಯಿಯ ಸೇವೆ.

**ಅಪ್ಪಳಾ:**—ರಾಮಲಿಂಗಯ್ಯನವರೆ! ಎಲ್ಲಿ ನೋಡಿದರೂ ತಮ್ಮ ಸ್ತೋತ್ರವೇ. ನನಗಂತೂ ಪರಮ ಸಂತೋಷ; ಪರಮ ಸಂತೋಷ.

**ರಾಮ:**—ಸಾಲವೊಂದು ಶೂಲವಾಗಿದೆ. ಧಾನ್ಯಗಳು ಮುಂತಾದವುಗಳನ್ನು ಸಂತರ್ಪಣೆಗೆ ಕೊಟ್ಟ ವರ್ತಕರ ಹಣ ತೀರಿಸಬೇಕು. ಮಾತೆತ್ತಿದರೆ 'ಧರ್ಮಕಾರ್ಯ ಇದಕ್ಕೆ ನೆರವಾಗದ ಜನ್ಮ ಜನ್ಮವೇ?' ಎನ್ನುತ್ತಿದ್ದರು. ಅವರೂ ಧರ್ಮ ಕಟ್ಟಿಕೊಳ್ಳಲೆಂದು ನಾನೂ ಸಂತೋಷದಿಂದ ಸುಮ್ಮನಿದ್ದೆ. ನಾನೇ ಹಣ ಕೊಡಬೇಕಾಗುವುದೆಂದು ಭಾವಿಸಿರಲಿಲ್ಲ. ಭಾವಿಸಿದ್ದರೆ ಮಿತವಾಗಿ ವೆಚ್ಚ ಮಾಡುತ್ತಿದ್ದೆ. ನನ್ನಿಂದ ಸಾಧ್ಯವಿದ್ದಷ್ಟೇ ಸೇವೆ ಮಾಡುತ್ತಿದ್ದೆ. ಮೋಸವಾಯಿತು. ನನ್ನಲ್ಲಿದ್ದ ಹಣವನ್ನೆಲ್ಲಾ ಕೊಟ್ಟೆ. ಆದರೂ ಸಾಲ ಬಹಳವಾಗಿ ಉಳಿದೇ ಇದೆ.

**ಅಪ್ಪಳಾ:** – ಸಾರ್ವಭೌಮರು ಬಂದ ಮೇಲೆ ಕೇಳಬಹುದಲ್ಲಾ?

**ರಾಮ:**—ಅದು ಉಚಿತವಲ್ಲ. ತಾವು ಹಣವನ್ನು ಸಾಲವಾಗಿ ಕೊಡಿಸಿ ಉಪಕಾರ ಮಾಡಿ. ಮುಂದೆ ತೀರಿಸುತ್ತೇನೆ. ಅದನ್ನೆಲ್ಲಾ ಆ ದಿನವೇ ತಮಗೆ ವಿಶದವಾಗಿ ಹೇಳಿದ್ದೇನೆ.

**ಅಪ್ಪಳಾ:**—ಪಾಪ! ಪಾಪ! ನೀವು ಧರ್ಮಾತ್ಮರು. ನನ್ನಲ್ಲಿ ಹಣವಿಲ್ಲ. ನನ್ನಲ್ಲಿ ಹಣವಿದ್ದ ಪಕ್ಷಕ್ಕೆ ಯೋಚನೆಯೇ ಇರುತ್ತಿರಲಿಲ್ಲ. ಮತ್ತೊಬ್ಬರಲ್ಲಿ ಹಣವಿದೆ. ಅವರನ್ನು ಬಿಟ್ಟು ಇನ್ನಾರಲ್ಲಿ ಸಾಲ ಮಾಡಿದರೂ ಗುಟ್ಟಾಗಿರುವುದಿಲ್ಲ. ಆದರೆ ಅವರು ವೈಷ್ಣವರು. ಸ್ಮಾರ್ತರಿಗೆ ಸಾಲ ಕೊಡುವುದಿಲ್ಲವೆನ್ನುತ್ತಾರೆ. ಶಿವನ ಹೆಸರು ಅವರಿಗೆ ಸರಿಬೀಳದು. ಅವರು ಮಾಧ್ವರು. ನೀವು ರಾಮಲಿಂಗ ಎನ್ನುವ ಹೆಸರನ್ನು ರಾಮಕೃಷ್ಣ—ಎಂದು ಮಾರ್ಪಡಿಸಿಕೊಂಡು ವೈಷ್ಣವರಾಗುವುದಾದರೆ, ಅವರು ಉಚಿತವಾಗಿಯೇ ನಿಮ್ಮ ಸಾಲದ ಹಣವನ್ನೆಲ್ಲಾ ಕೊಟ್ಟುಬಿಡುತ್ತಾರೆ.

**ರಾಮು**:—ಸ್ವಲ್ಪ—ಸ್ವಲ್ಪ—ಸ್ವಲ್ಪ ತಡೆಯಿರಿ. ಕಮಲಾ! ಕಮಲಾ! ಇಲ್ಲಿ ಬಾ ಬೇಗ ಬಾ! (ಕಮಲೆಯು ಪ್ರವೇಶಿಸುವಳು) ನಿನಗೆ ವಿಭೂತಿ ಇಷ್ಟವೆ? ಅಂಗಾರ ಇಷ್ಟವೆ? ಕೆಂಪು ನಾಮ ಇಷ್ಟವೆ? ನಾನು ಪತ್ರ್ಯಮೇಲೆ ಹಣೆಗೆ ಯಾವುದನ್ನು ಇಟ್ಟುಕೊಳ್ಳಲು ಆಶೆ? ಅಂಗಾರವನ್ನೇ—ವಿಭೂತಿಯನ್ನೇ ಹೇಳು. ಹೇಳು. (ಕಮಲೆ ಮುಖವನ್ನು ಹಿಂಡಿಕೊಂಡು ಹೊರಟು ಹೋಗುವಳು)

**ಅಪ್ಪಳಾ**:—ವಿನೋದ ಹಾಗಿರಲಿ. ಹೇಳಿ.

**ರಾಮು**:—ನಾನು ವೈಷ್ಣವನಾಗಿಯೇ ಇದ್ದೇನೆ. ಬಾಲ್ಯದಿಂದ ನಾನು ಹೇಳಿ ಹೇಳಿ ಆನಂದಿಸಿರುವ ಗೀತ ಕೇಳಿ. ಮುದ್ದು ಕೃಷ್ಣನ ಸೊಬಗು ನೋಡಿ. (ಹಾಡುವನು) ಆದರೆ ನಾನು ಅವರಂಥ ವೈಷ್ಣವನಲ್ಲ. ಎಂದರೆ ವೈಷ್ಣವ ಕುಲದಲ್ಲಿ ಹುಟ್ಟಿದವನಲ್ಲ. ಆ ಚಿತ್ರಪಟವನ್ನು ನೋಡಿ. ಅದು ವ್ಯಾಸರಾಯಸ್ವಾಮಿಗಳದು. ಪ್ರತಿದಿನವೂ ಅದನ್ನು ನೋಡಿ ನಮಸ್ಕರಿಸಿ ಧನ್ಯನಾಗುತ್ತಿದ್ದೇನೆ.

**ಅಪ್ಪಳಾ**:—ಸರಿ ಮತ್ತೆ. ರಾಮಕೃಷ್ಣನೆಂತ ಹೆಸರಿಟ್ಟುಕೊಳ್ಳಿ. ರಾಮಲಿಂಗ ಬೇಡ.

**ರಾಮು**:—(ನಗುತ್ತ) ಆಗಬಹುದು. ಇನ್ನು ಮೇಲೆ ನನ್ನ ಹೆಸರು ತೆನಾಲಿ ರಾಮಕೃಷ್ಣ. ಎಲ್ಲರೂ ಇನ್ನು ಮುಂದೆ ನನ್ನನ್ನು ರಾಮಕೃಷ್ಣನೆನ್ನಬೇಕು. ತೃಪ್ತಿಯಾಯಿತೆ?

**ಅಪ್ಪಳಾ**:—(ಸುಪ್ರೀತನಾಗಿ) ನೀವು ವೈಷ್ಣವರಾಗಬೇಕು.

**ರಾಮು**:—ಈಗ ನಾನು ವೈಷ್ಣವನಲ್ಲವೇನು? ವಿಷ್ಣುಭಕ್ತರೆಲ್ಲಾ ವೈಷ್ಣವರೇ ತಾನೆ? (ಸ್ವಗತ) ಇರಲಿ. ಇವನ ತಂತ್ರಕ್ಕೆ ತಕ್ಕ ಪ್ರತಿಕಾರ ಮಾಡುತ್ತೇನೆ.

**ಅಪ್ಪಳಾ**:—ಹಾಗಾದರೆ ಶಿವನಿಗಿಂತ ವಿಷ್ಣು ಹೆಚ್ಚೆಂದು ಬರೆದುಕೊಡಿ. ಗೀರ್ವಾಣ ಭಾಷೆಯಲ್ಲಿ 'ಶಿವಾದಪ್ಯಧಿಕೋವಿಷ್ಣುಃ' ಎಂದು ಬರೆದು ಕೊಡಿ.

**ರಾಮು**:—ಬರೆದುಕೊಟ್ಟೇನು. ಒಂದೇ ಸಂಶಯ ನೋಡಿ. ನಾನು ವಿಷ್ಣುವನ್ನೂ ಕಾಣೆ. ಶಿವನನ್ನೂ ಕಾಣೆ. ಅವರಲ್ಲಿ ಯಾರು ಹೆಚ್ಚೋ ಯಾರು ಕಡಮೆಯೋ ಹೇಗೆ ಹೇಳಲಿ? ಅದೊಂದೇ ಸಂಶಯ. ಅವರಿಬ್ಬರನ್ನೂ

ನೋಡಿದವರಾರಾದರೂ ಸಿಕ್ಕಿದರೆ ಕೇಳಿಯೇನು. ಆದರೆ ಅಂತಹವರಾರೂ ಸಿಕ್ಕಿಲ್ಲ. (ನಗುತ್ತ) ನೀವು ನೋಡಿದ್ದೀರಾ? ಅವರನ್ನು ನೀವೂ ನೋಡಿದಂತಿಲ್ಲ.

**ಅಪ್ಪಳಾ:**—ಈಗೇನು ಬರೆದುಕೊಡುವಿರೋ ಇಲ್ಲವೋ? ನಾನು ಬೇಗ ಹೋಗಿ ತಿಳಿಸಬೇಕು.

**ರಾಮ:**—ಆಗಲಿ. ಬರೆದುಕೊಡುತ್ತೇನೆ. ನಾಳೆ ಬೆಳಗ್ಗೆ ಆ ಕೆಲಸ ತೀರಿಸಿಬಿಡೋಣ. ನಾಡಿದ್ದಿನಿಂದ ನಾನು ಊರಿನಲ್ಲಿರುವುದಿಲ್ಲ. ತಾವು ದಯ ಮಾಡಿ. ತಮ್ಮಿಂದ ಬಹಳ ಉಪಕಾರವಾಯಿತು.

**ಕಮಲೆ:**—(ಅಪ್ಪಳಾಚಾರ್ಯನು ಹೋದ ಬಳಿಕ ಪ್ರವೇಶಿಸಿ) ಅಂಗಾರ, ವಿಭೂತಿ ಅಂತ ಹಾಳು ಮಾತುಗಳು ಹೇಳಿದಿರಿ. ವೈಷ್ಣವರಾಗಿ ಬಿಡೋದೆ? ಅದೂ ದುಡ್ಡಿನ ಆಶೆಗೆ? ಹೊಸ ಹೆಸರು ಬೇರೆ ಇಟ್ಟುಕೊಂಡಿರಿ? ತಾಯಿ ತಂದೆಗಳಿಟ್ಟ ಹೆಸರು ಬೇಡವಾಯಿತು.

**ರಾಮ:**—ಎಷ್ಟೋ ಜನ್ಮಗಳೆತ್ತಿ ದೇಹಗಳೇ ಬೇರೆ ಬೇರೆಯಾಗಬಹುದಂತೆ. ಹೆಸರು ಬೇರೆಯಾದರೇನಂತೆ? ಜೀವನವೇ ಒಂದು ನಾಟಕ ಕಮಲಾ! ನಾನು ಮಾಡುವ ಯುಕ್ತಿಯಿಂದ ಅಪ್ಪಳಾಚಾರ್ಯರು ತಮ್ಮ ತಲೆ ತಾವೇ ನುಂಗಿದ ಹಾಗಾಗಿ ಹಳ್ಳಕ್ಕೆ ಬೀಳುತ್ತಾರೆ.

**ಕಮಲೆ:**—(ನಕ್ಕು) ನಿಮ್ಮ ಯುಕ್ತಿ, ಶಕ್ತಿ, ಎಲ್ಲಾ ಇಂಥಾ ಪ್ರಾಣಿಗಳ ಮೇಲೇ ಪ್ರಯೋಗ! ನಾಡಿದ್ದು ಪ್ರಯಾಣ ಎಲ್ಲಿಗೆ?

**ರಾಮ:**—ವೇಷಧಾರಿಯಾಗಿ ಕೃಷ್ಣಾಸಾನಿಯ ಊರಿಗೆ. ಅವಳ ಪರೀಕ್ಷೆಗೆ. (ಇಬ್ಬರೂ ನಗುವರು) ನಾಡಿದ್ದು ದಿಗ್ವಿಜಯ ಪ್ರಯಾಣ.

**ಕಮಲೆ:**—ನನಗೆ ತಂಗಿ ಬರುವಳೊ? ಸವತಿಯ ಆರತಿಗೆ ಸಿದ್ಧಮಾಡಿರಲೇನು? ಯಾರು ಆ ಕೃಷ್ಣಾಸಾನಿ? ವೇಶ್ಯೆಯಿರಬೇಕು. ಇದೇನು ವಿನೋದವೋ ಕಾಣೆ! ಹೇಳಿ! ಕೇಳಿ ಹರ್ಷಿಸುತ್ತೇನೆ. (ಇಬ್ಬರೂ ನಗುವರು)

(ತೆರೆ ಬೀಳುವುದು)

—

## ದೃಶ್ಯ ೪

( ಬೆಟ್ಟದ ಕಡೆಯಿಂದ ಬರುವ ಮಾರ್ಗ. ಪಂಜುಗಳನ್ನು ಹಿಡಿದಿರುವ ಆಳುಗಳು ಮುಂದೆ ಬರುವರು. ಅವರ ಹಿಂದೆ ಸ್ವಲ್ಪ ದೂರದಲ್ಲಿ ರಂಗನಾಥ ದೀಕ್ಷಿತನೂ ಬಸವರಸ ಒಡೆಯನೂ ಬಲಭದ್ರಪಾತ್ರನೂ ಪ್ರವೇಶಿಸುವರು. )

**ರಂಗ:**—ನಾವು ಹೊರಡಲು ಮೇಲಕ್ಕೇಳುವಷ್ಟರಲ್ಲಿ ಆ ಬಂಡೆಯ ಹಿಂದೆ ತರಗಿನ ಮೇಲೆ ಸರಸರ ಶಬ್ದವಾಯಿತಲ್ಲಾ. ಯಾರಾದರೂ ಹೊಂಚು ಕೇಳಿರಬಹುದೋ ಏನೋ ಎಂತ ಯೋಚನೆ.

**ಬಸವರಸ:**— ನಿಮ್ಮದು ಬಹಳ ಅನುಮಾನಪ್ರಕೃತಿ. ಈ ನಿಶೀಥ ಸಮಯದಲ್ಲಿ ಯಾರು ಬಂದಿದ್ದಾರು?

**ಬಲಭದ್ರ:**—ನಾವು ಬಂದಿರುವುದು ಮನುಷ್ಯಮಾತ್ರಕ್ಕೇ ಗೋಚರವಿಲ್ಲ. ಇದರ ಮೇಲೆ ನಾವು ಬಂದಾಗಲೂ, ಹೊರಟು ಬರುವಾಗಲೂ ನಾನು ಬಂಡೆಯನ್ನು ಬಳಸಿ ಬಂದೆ. ದೀಕ್ಷಿತರೆ, ವಿಷಯ ಬಹಳ ರಹಸ್ಯವಾಗಿರಬೇಕು

**ರಂಗ:**—ಅಗತ್ಯವಾಗಿ, ಅಗತ್ಯವಾಗಿ. ಅದನ್ನು ಹೇಳಬೇಕಾಗಿಯೇ ಇಲ್ಲ. ತನ್ನ ತಲೆಯ ಮೇಲೆ ತಾನೇ ಮಣ್ಣೊರಚಿಕೊಳ್ಳುವ ಆನೆಯಂತೆ ನಾನು ವರ್ತಿಸಿಯೇನೆ?

**ಬಸವ:**—ನಮ್ಮ ಇಮ್ಮಡಿ ಭೈರರಸ ಒಡೆಯ ಬದುಕಿದ್ದಾನೆಂದು ಮಹಾಪ್ರಧಾನರು ಹೇಳುತ್ತಲೇ ಇದ್ದಾರೆ. ಆದರೆ ಅವನೆಲ್ಲಿದ್ದಾನೆಂದು ಕೇಳಿದರೆ ಮಾತ್ರ ಅದು ತಿಳಿಯದೆಂದು ಹೇಳಿ ಅಡ್ಡ ಮಾತು ತೆಗೆಯುತ್ತಾರೆ. ಈ ಮೋಸ! ಈ ಕೃತ್ರಿಮ! ಕೃಷ್ಣದೇವರಾಯರು ಕೂಡ ಹೀಗೆಯೇ ಮಾಡುತ್ತಿದ್ದಾರೆ. ಅದಕ್ಕೆ ತಕ್ಕ ಶಾಸ್ತಿಯಾಗಲಿ. ಅವರು ಅದನ್ನು ಅನುಭವಿಸಲಿ. ಅವರು ಸರಿಯಾಗಿ ನಡೆದಿದ್ದರೆ ನಾವು ಈ ಒಳಸಂಚುಗಳನ್ನೆಲ್ಲಾ ನಡೆಯಿಸಬೇಕಾದುದೇ ಇರಲಿಲ್ಲ. ನಮ್ಮ ತಲೆಗಳನ್ನು ಕೇಳಿದ್ದರೂ ಒಪ್ಪಿಸುತ್ತಿದ್ದೆವು.

**ಬಲಭದ್ರ:**—ಸರಿಯಾಗಿ ನಡೆದಿದ್ದರೆ ಅದರ ಮಾತೇ ಬೇರೆ. ಕೃಷ್ಣದೇವರಾಯರು ಶಿವನ ಸಮುದ್ರ ಮುಂತಾದ ಕಡೆಗಳಿಂದ ಚಿನ್ನ-ಬೆಳ್ಳಿಗಳ ರಾಶಿ

ಯನ್ನು ದೋಚಿ ತಾದಿದ್ದಾರೆ. ಗೋಲಕೊಂಡದ ವಜ್ರದ ಗಣಿಗಳು ಕುಬೇರನ ಕಣಜದಂತಿವೆ. ಅವರ ಅಂತಃಪುರದ ಸುವರ್ಣ ಪುತ್ಥಳಿಗಳೋ ರತ್ನ ಖಚಿತವಾದ ಚಿನ್ನದ ಮಂಚಗಳೋ ಮನೋಜ್ಞವಾಗಿವೆ. ಹೀಗಿದ್ದೂ ದುರ್ಗಮಸೀಯವಾದ ದುರಾಶೆ. ಉದಯಗಿರಿಯನ್ನು ಗೆದ್ದು ಬಂದಿದ್ದಾರೆ. ಇನ್ನೂ ಆಶೆ. ನಮ್ಮ ರಾಜ್ಯದ ಮೇಲೂ ಕೈಮಾಡುವುದರಲ್ಲಿದ್ದಾರೆ.

**ರಂಗ:**—ಮಹಾಸ್ವಾಮಿ! ಇವರ ಆಶೆಯನ್ನು ತುಳಿಯುವುದಕ್ಕೂ, ವೈಷ್ಣವನಾಗಿ ಮಾರ್ಪಟ್ಟು ರಾಮಕೃಷ್ಣನೆಂದು ಹೆಸರಿಟ್ಟುಕೊಂಡು ಆ ಅಪ್ಪಳಾಚಾರ್ಯನೊಡನೆ ಸೇರಿ ಮೆರೆಯುತ್ತಿರುವ ಆ ರಾಮಲಿಂಗನಿಗೆ ಬುದ್ಧಿ ಕಲಿಸುವುದಕ್ಕೂ ನಾನೊಂದು ಉಪಾಯ ಮಾಡಿದ್ದೇನೆ.

**ಬಸವ:**—ಹೇಗಾದರೂ ಸರಿಯೆ. ಅವನನ್ನು ಪೂರ್ತಿ ಮಾಡಿಬಿಡಬೇಕು.

**ರಂಗ:**—ಛೀ! ಛೀ! ಕೊಲ್ಲಬಾರದು. ಸೆರೆಹಿಡಿಯಬೇಕು. ನರಹತ್ಯೆಗೆ ನಾನು ಒಪ್ಪಲಾರೆ. ಗೀತಗೋವಿಂದದ ಅಭಿನಯದ ಏರ್ಪಾಡೇ ಇದಕ್ಕೆ ಸರಿಯಾದ ಮಾರ್ಗ.

**ಬಲಭದ್ರ:**—ಇದಕ್ಕೆ ನಾನು ಒಪ್ಪಿದ್ದೇನಲ್ಲ.

**ರಂಗ:**—ಆದರೂ ಗೀತಗೋವಿಂದದ ಅಭಿನಯದ ದಿನ ಕಠಾರಿಯಿಂದ ತಿವಿಯುವಾಗ ಅನಾಹುತವಾದರೆ? ಕೃಷ್ಣದೇವರಾಯನನ್ನು ಜೀವದಿಂದ ಉಳಿಸಿರಬೇಕು.

**ಬಲಭದ್ರ:**—ಅದಕ್ಕೆ ಸರಿಯಾದ ಏರ್ಪಾಡು ಮಾಡಿದರಾಯಿತು. ಇನ್ನು ಹೋಗೋಣ ನಡೆಯಿರಿ (ಎಲ್ಲರೂ ಹೋಗುವರು).

**ರಾಮಲಿಂಗ:**—(ಪ್ರವೇಶಿಸಿ) ಅಬ್ಬ! ಎಂತಹ ಒಳಸಂಚು? ತರಗಿನ ಮೇಲೆ ನಡೆದಾಗ ನನಗೆ ಹಸುರುಗಿಡಗಳ ಪೊದೆಯೊಳಕ್ಕೆ ಹೋಗಿ ಹುದುಗಿಕೊಳ್ಳಲು ಪ್ರೇರಣೆ ಒಂದು ಸಹಾಯವಾಯಿತು. ಓಡಿ ಹೋಗಿದ್ದರೆ ಖಂಡಿತ ಅವರೆಲ್ಲರೂ ನನ್ನನ್ನು ಕಾಣುತ್ತಿದ್ದರು. ಕುಣಿಸು, ಕುಣಿಸು ತಾಯೆ! ನಮ್ಮೆಲ್ಲರನ್ನೂ ಕುಣಿಸಿ ಕುಣಿಸಿ ಆನಂದಿಸು. ಅತ್ತ ಕೃಷ್ಣಾಸಾನಿಯ ಊರಿಗೆ ಹೋಗಿ ಪರೀಕ್ಷಿಸಿ ಬಂದುದಾಯಿತು. ಇಂದು ಪ್ರಯಾಣ ಹೊರಟು ಬರುವಾಗ ದಾರಿ

ತಪ್ಪಿ ಕತ್ತಲು ಕವಿದುದೂ ಎಷ್ಟೋ ಸಹಾಯವಾಯಿತು. ಸಾರ್ವಭೌಮ ಕೃಷ್ಣದೇವರಾಯನ ಪ್ರಾಣವನ್ನುಳಿಸುವೆನು. ಜಗನ್ಮಾತೆ! ನಿನ್ನ ಚಿತ್ತವೇ ನನ್ನ ಭಾಗ್ಯ (ಹೋಗುವನು).

(ತೆರೆ ಬೀಳುವುದು)

—

## ದೃಶ್ಯ ೫

[ಕೃಷ್ಣದೇವರಾಯನ ಆಸ್ಥಾನ. ಅಪ್ಪಾಜಿ, ಬಲಭದ್ರಪಾತ್ರ, ರಂಗನಾಥದೀಕ್ಷಿತ, ಬಸವರಸ, ಅಲ್ಲಸಾನಿ ಪೆದ್ದನ್ನ, ಭಟ್ಟಮೂರ್ತಿ ಮುಂತಾದವರೆಲ್ಲರೂ ಸಭೆಯಲ್ಲಿರುವರು.]

ಅಪ್ಪಾಜಿ:—(ಎದ್ದು ನಿಂತು) ಉದಯಗಿರಿ ಕೋಟೆಯ ಮುತ್ತಿಗೆಯ ಕಾಲದಲ್ಲಿ, ಪ್ರತಾಪರುದ್ರಗಜಪತಿಮಹಾರಾಜರವರ ಸೋದರತ್ತೆಯವರು ಅಲ್ಲಿಗೆ ಬರುತ್ತಿದ್ದು ದಾರಿಯಲ್ಲಿ ಸೆರೆ ಸಿಕ್ಕಿರುವುದು ಸರಿಯಷ್ಟೆ. ಸೇನಾಪತಿಗಳವರು ಸನ್ನಿಧಾನದ ಆಜ್ಞೆಯನ್ನೇ ನಿರೀಕ್ಷಿಸಿಕೊಂಡಿರುವುದಾಗಿ ಹೇಳಿ ಕಳುಹಿಸಿದ್ದಾರೆ. (ಕೃಷ್ಣದೇವರಾಯನು ಚಿಂತಾಮಗ್ನನಾಗಿರುವನು)

ಬಲಭದ್ರ:—(ಸ್ವಗತ) ಈ ಅಪ್ಪಾಜಿ ನಾನು ತಲೆ ತಗ್ಗಿಸುವಂತೆ ಮಾಡುವುದಕ್ಕಾಗಿಯೇ ಈ ಚುಚ್ಚು ನುಡಿಗಳನ್ನಾಡಿರಬೇಕು. ಇರಲಿ. ನಮ್ಮ ಒಳಸಂಚು ಬಲಿಯುತ್ತಿದೆ, ಈ ಹಾರಾಟ ಇನ್ನೆಷ್ಟು ಕಾಲ!

ಕೃಷ್ಣ:—(ಸ್ವಗತ)ಅಪ್ಪಾಜಿಯವರಿಗೆ ಉತ್ತರ ಹೇಳಬೇಕಲ್ಲವೆ? ಏನೆಂದು ಹೇಳಲಿ? ಉದಯಗಿರಿಯ ಹೆಸರನ್ನು ಕೇಳಿದರೆ ನನ್ನ ಮನಸ್ಸು ರೋಷಭೀಷಣವಾಗುತ್ತದೆ. ಆ ಹಾಳು ಉದಯಗಿರಿಯ ಮುತ್ತಿಗೆಗೆ ನಾವು ತೆರಳಿದುದರಿಂದಲೇ ಅಲ್ಲವೆ ಆ ದುರಾತ್ಮನಾದ ರಾಮಲಿಂಗಯ್ಯನು ಕೃಷ್ಣಾಸಾನಿಯ ಊರಿಗೆ ಹೋಗಲು ಅವಕಾಶ ದೊರೆಯಿತು. ಅವನು ಗೋಸಾಯಿ ವೇಷದಿಂದ ಅಲ್ಲಿಗೆ ಹೋಗಿ ಅವಳ ಮನೆಯಲ್ಲಿದ್ದನೆಂಬುದನ್ನು ಗೂಢಚಾರರಿಂದ ಕೇಳಿದಾಗಿನಿಂದ ನನ್ನ ಮನಸ್ಸು ರೋಷೋನ್ಮತ್ತವಾಗಿದೆ. ಈ ಧರ್ಮಸಚಿವನನ್ನು ತೊಲಗಿಸಿದಲ್ಲದೆ ನನ್ನ ಮನಸ್ಸಿಗೆ ಶಾಂತಿಯಿಲ್ಲ. ಅವನನ್ನು ಓಡಿಸಲು ಕಾರಣ ದೊರೆತರೆ ಸಾಕು. ಇರಲಿ. ಅಪ್ಪಾಜಿಯವರಿಗೆ ಹೀಗೆ

ಹೇಳುವೆನು. (ಪ್ರಕಾಶ) ಅಪ್ಪಾಜಿ! ಪ್ರತಾಪರುದ್ರಗಜಪತಿ ಮಹಾರಾಜ ರವರ ಸೋದರತ್ತೆಯವರನ್ನು ಸಮಸ್ತ ಮರ್ಯಾದೆಗಳೊಡನೆ ಅವರ ಸೋದರಳಿಯಂದಿರವರ ರಾಜಧಾನಿಗೆ ಕಳುಹಿಸಬೇಕೆಂದು ನಿರೂಪವನ್ನು ಸೇನಾಪತಿಗಳಿಗೆ ಕಳುಹಿಸಿ. ಅವರು ಆರೋಗ್ಯಲಾಭವನ್ನು ಪಡೆಯಲು ಆಲಸ್ಯವಾಯಿತು. ಇಲ್ಲದೇ ಹೋಗಿದ್ದಲ್ಲಿ ನಾವು ಉದಯಗಿರಿಯಲ್ಲಿದ್ದಾಗಲೇ ಅವರನ್ನು ಆ ರೀತಿ ಕಳುಹಿಸಿ ಬರುತ್ತಿದ್ದೆವು.

ಅಪ್ಪಾಜಿ:—ಅವರು ಆರೋಗ್ಯಲಾಭವನ್ನು ಪಡೆಯುವುದು ಆಲಸ್ಯ ವಾದರೂ ಚಿಂತೆಯಿಲ್ಲ. ಅವರು ಬದುಕಿದ್ದಾರಲ್ಲಾ ಎಂಬುದೇ ನಮಗೊಂದು ಸಂತೋಷ. ವಿಜಯಲಾಭದಿಂದ ಉನ್ಮತ್ತರಾಗಿದ್ದ ನಮ್ಮ ಸೈನಿಕರು ಅವ ರನ್ನು ಕೊಂದುಬಿಟ್ಟಿದ್ದರೆ ಸಾಮ್ರಾಜ್ಯಕ್ಕೇ ಅಪಖ್ಯಾತಿ ಅವರನ್ನು ಸೈನಿ ಕರು ಹಿಂಸಿಸಿ ಘಾಸಿಪಡಿಸುತ್ತಿದ್ದುದನ್ನು ಧರ್ಮಸಚಿವ ರಾಮಲಿಂಗಯ್ಯ ಕಂಡು ಅಡ್ಡಿಪಡಿಸಿದುದರಿಂದ ಪರಮೋಪಕಾರವಾಯಿತು. ಅವನು ಸನ್ಮಾನಕ್ಕೆ ಪಾತ್ರನಾಗಿದ್ದಾನೆ. (ಕೃಷ್ಣದೇವರಾಯನು ಅಸಮಾಧಾನದ ಮುಖ ಭಾವದಿಂದ ಮೌನವಾಗಿರುವನು).

ಬಲಭದ್ರ:—(ಸ್ವಗತ) ರಾಮಲಿಂಗಯ್ಯನನ್ನು ಮುರಿಯಲು ನಮ್ಮ ಗೂಢಾಲೋಚನೆಯು ನೆರವೇರುವುದಕ್ಕೆ ಇದೇ ತಕ್ಕ ಸಮಯ. ಎಂತಹ ರಹಸ್ಯಗಳನ್ನಾದರೂ ಅವನು ಭೇದಿಸಿ ಅಪ್ಪಾಜಿಗೆ ಸಹಾಯಮಾಡುತ್ತಿರು ವನು. ಮುಂದೆ ನಮ್ಮ ಒಳಸಂಚನ್ನೂ ಗೊತ್ತುಮಾಡಿಕೊಂಡು ನಮ್ಮ ಕಾರ್ಯವು ಹದಗೆಡುವಂತೆ ಮಾಡಬಹುದು. (ಎದ್ದು ನಿಂತು) ಮಹಾಸನ್ನಿಧಿ ಯಲ್ಲಿ ನನ್ನ ಅರಿಕೆಯಿಷ್ಟೆ: ಧರ್ಮಸಚಿವರು ತಮ್ಮ ಕರ್ತವ್ಯವನ್ನು ಮಾತ್ರವೇ ನೆರವೇರಿಸಿದರು, ಅದಕ್ಕೆ ಸನ್ಮಾನವೇಕೆ? ಇದು ನಮ್ಮ ಮಹಾರಾಜರಿಗೆ ಪರೋಕ್ಷವಾಗಿಯಾದರೂ ಸಂಬಂಧಪಟ್ಟ ಸನ್ನಿವೇಶದ ವಿಚಾರವಾದುದ ರಿಂದ ನಾನು ಮಾತನಾಡಿದೆ. ಅಪರಾಧವಾಗಿದ್ದರೆ ಕ್ಷಮಿಸಬೇಕೆಂದು ಪ್ರಾರ್ಥನೆ.

ಅಪ್ಪಾಜಿ:—(ಎದ್ದು ನಿಂತು) ಕರ್ತವ್ಯವನ್ನು ಮಾತ್ರವೇ ನೆರವೇರಿಸಿದವ ರಿಗೂ ಪಾರಿತೋಷಕಗಳನ್ನು ಕರುಣಿಸಿ ಸನ್ಮಾನಿಸುವುದು ರಾಜಧರ್ಮ. ಸನ್ನಿಧಾನಕ್ಕೆ ಸೂಕ್ತತೋರಿದುದೇ ನಮಗೆ ಮಹಾಪ್ರಸಾದ.

**ರಂಗ:**—(ಎದ್ದು ನಿಂತು)ಪ್ರಭುಸನ್ನಿಧಿಯಿಂದ ಅಭಯವಾದರೆ ನಾನು ಒಂದು ಅಂಶವನ್ನು ಅರಿಕೆ ಮಾಡುವೆನು.

**ಕೃಷ್ಣ:**— ನಿರ್ಭಯವಾಗಿಯೂ ನಿಸ್ಸಂಕೋಚವಾಗಿಯೂ ತಿಳಿಸಬಹುದು.

**ರಂಗ:**— ಧರ್ಮಸಚಿವರು ದೇವೀ ಸಾಕ್ಷಾತ್ಕಾರವನ್ನು ಪಡೆದವರೆಂದು ಪ್ರತೀತಿ; ಅನೇಕರ ನಂಬಿಕೆ. ಆದರೆ ಅವರ ವರ್ತನೆಯನ್ನು ಕಂಡು ನಾವೆಲ್ಲರೂ ತಲೆ ತಗ್ಗಿಸುವಂತಿದೆ. ಕನ್ನಡಿಗರ ಕಣ್ಣಿನಂತಿರುವ ಈ ಸಾಮ್ರಾಜ್ಯದ ಧರ್ಮಸಚಿವರೆಂದರೇನು ? ಅವರು ಗೋಸಾಯಿ ವೇಷವನ್ನು ಹಾಕಿಕೊಂಡು ಪರಸ್ಥಳಕ್ಕೆ ಹೋಗಿ ವೇಶ್ಯೆಯ ಮನೆಯಲ್ಲಿದ್ದು ಬರುವುದೆಂದರೇನು ? ಆ ರೀತಿ ವಾರ್ತೆ ಎದ್ದಿದೆ. ಆ ವೇಶ್ಯೆ ಯಾರೆಂಬುದು ಮಾತ್ರ ಇನ್ನೂ ತಿಳಿದುಬಂದಿಲ್ಲ. ಶತ್ರುಪಕ್ಷದವರೆಲ್ಲರೂ ಅಪಹಾಸ್ಯ ಮಾಡಿಕೊಂಡು ನಗುತ್ತಿದ್ದಾರೆ. 'ಉದರನಿಮಿತ್ತಂ ಬಹುಕೃತ ವೇಷಃ' ಎಂಬಂತೆ ಉದರನಿಮಿತ್ತವಾಗಿ ಧರ್ಮಸಚಿವರು ದೇವಿಯ ಸಾಕ್ಷಾತ್ಕಾರದ ವೇಷಹಾಕಿದ್ದಾರೆಂದು ಎಲ್ಲೆಲ್ಲಿಯೂ ಗುಜುಗುಜು ಕೇಳಿದ ಸಂಗತಿಯನ್ನು ಅರಿಕೆ ಮಾಡಿಕೊಂಡಿದ್ದೇನೆ.

**ಅಪ್ಪಾಜಿ:**—(ಎದ್ದುನಿಂತು) ರಾಮಲಿಂಗಯ್ಯನನ್ನು ನಾನು ಚೆನ್ನಾಗಿ ಬಲ್ಲೆ. ಕಾಮಿನೀಕಾಂಚನಗಳಿಗೆ ಆತ ಆಶಿಪಡುವವನೇ ಅಲ್ಲ. ಸ್ತ್ರೀಜಾತಿ ಮಾತ್ರದಲ್ಲಿ ಆತನಿಗೆ ಮಾತೃಭಾವನೆ.

**ರಂಗ:**—(ಎದ್ದುನಿಂತು) ಮಹಾಪ್ರಧಾನರೆದುರಿಗೆ ಹಾಗೆ ನಾಟ್ಯಮಾಡಿರಬಹುದು. ದೇವಾಲಯಕ್ಕೆ ಹೋದಾಗ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಯೇ ಇರುತ್ತಾರೆ.

**ಅಪ್ಪಾಜಿ:**—(ಎದ್ದು) ರಾಮಲಿಂಗಯ್ಯನು ಗೋಸಾಯಿ ವೇಷಹಾಕಿಕೊಂಡು ವೇಶ್ಯಾಗೃಹಕ್ಕೆ ಹೋಗಿದ್ದರೂ ಏನೋ ಪ್ರಬಲವಾದ ಕಾರಣದಿಂದಲೇ ಹಾಗೆ ಮಾಡಿರಬೇಕು.

**ರಂಗ:**—(ಎದ್ದು) ದೇವಿಯ ಸಾಕ್ಷಾತ್ಕಾರವನ್ನು ಪಡೆಯಲು ಹೋಗಿರಬೇಕು.

**ಬಲಭದ್ರ**:—(ಸ್ವಗತ) ಭಲಾ ! ನಮ್ಮ ರಂಗನಾಥ ಧೀಕ್ಷಿತರು ಒಳ ಸಂಚಿನ ಸೂತ್ರವನ್ನು ಚೆನ್ನಾಗಿ ಆಡಿಸಿದರು. (ಪ್ರಕಾಶ-ಎದ್ದು) ವಿಜಯನಗರ ಸಾಮ್ರಾಜ್ಯದ ಧರ್ಮಸಚಿವರು ಇಂತಹ ಅಕಾರ್ಯವನ್ನಾಚರಿಸಿದ ಮೇಲೆ ನಾವೆಲ್ಲರೂ ತಲೆ ತಗ್ಗಿಸಬೇಕಾಯಿತು. ಧರ್ಮಸಚಿವರು ತಮ್ಮ ಸ್ಥಾನ ಗೌರವವನ್ನು ಕಾಪಾಡಿಕೊಳ್ಳಲಿಲ್ಲ. ಶ್ರೀವಿದ್ಯಾರಣ್ಯ ಸ್ವಾಮಿಗಳು ಹಿಂದೆ ಧರ್ಮೋಪದೇಶ ಮಾಡಿದ ವಿಜಯನಗರ ಸಾಮ್ರಾಜ್ಯಕ್ಕೆ ಈ ಅವಸ್ಥೆಯೆ? ನನ್ನ ಮಾತು ಅಧಿಕಪ್ರಸಂಗವಾಗಿದ್ದರೆ ಕ್ಷಮಾಪ್ರಾರ್ಥನೆ ಮಾಡುತ್ತೇನೆ.

**ಕೃಷ್ಣ**:— ಬಲಭದ್ರಪಾತ್ರರೆ! ಕ್ಷಮಾಪ್ರಾರ್ಥನೆಗೇನೂ ಕಾರಣವಿಲ್ಲ.

**ಬಸವ**:—(ಎದ್ದು ನಿಂತು) ಧರ್ಮಸಚಿವರು ತಮ್ಮ ತೂಕವನ್ನು ಕಾಪಾಡಿ ಕೊಂಡಿಲ್ಲ. ಮಹಾ ಮಾತೃಶ್ರೀಯವರು ಅಂತ್ಯಕಾಲದಲ್ಲಿ ಮಾವಿನ ಹಣ್ಣು ಗಳನ್ನಪೇಕ್ಷಿಸಿದ್ದರು. ಅವು ಬರುವ ಮೊದಲೇ ದಿವಂಗತರಾದುದಕ್ಕಾಗಿ ವಿಷಾದಿಸಿ, ಅವರ ತೃಪ್ತಿಗಾಗಿ ಶ್ರಾದ್ಧಕಾಲದಲ್ಲಿ ಸನ್ನಿಧಾನದಿಂದ ಚಿನ್ನದ ಮಾವಿನ ಹಣ್ಣುಗಳ ದಾನವನ್ನು ಪಡೆದ ಬ್ರಾಹ್ಮಣರಿಗೆ ತೇಜೋವಧೆ ಮಾಡಿದ ಕುಚೇಷ್ಟೆಗಿಂತ ಬೇಕೆ? ವಾಯು-ನೋವಿಗೆ ಬರೆ ಹಾಕಿಸಿಕೊಳ್ಳ ಬೇಕೆಂದು ಧರ್ಮಸಚಿವರ ತಾಯಿಯವರು ಬಯಸಿದ್ದರಂತೆ; ಕಬ್ಬಿಣದ ಸಲಾಕಿ ಗಳನ್ನು ಕಾಯಿಸಿ ತರುವಷ್ಟರಲ್ಲಿ ಅವರ ಪ್ರಾಣ ಹೋಯಿತಂತೆ, ಸರಿ. ಅವರ ತೃಪ್ತಿಗಾಗಿ ಬ್ರಾಹ್ಮಣರಿಗೇ ಬರೆಹಾಕಲು ಧರ್ಮಸಚಿವರು ಸಲಾಕಿಗಳನ್ನು ಕಾಯಿಸಿ ತಂದರು. 'ಚಿನ್ನದ ಮಾವಿನ ಹಣ್ಣುಗಳಾದರೆ ಬೇಕು; ಬರೆಗಳಾದರೆ ಮಾತ್ರ ಬೇಡವೇನೋ' ಎಂದು ಹೇಳಿ ತೇಜೋವಧೆ ಮಾಡಿ ಚಿನ್ನದ ಮಾವಿನ ಹಣ್ಣುಗಳನ್ನು ಕಸಿದುಕೊಂಡು ಬ್ರಾಹ್ಮಣರನ್ನು ಓಡಿಸಿದರು.

**ಅಪ್ಪಾಜಿ**:—(ಎದ್ದು ನಿಂತು) ರಾಮಲಿಂಗಯ್ಯ ಚಿನ್ನದ ಹಣ್ಣುಗಳನ್ನು ಅರಮನೆಗೆ ಒಪ್ಪಿಸಿದ. ಸನ್ನಿಧಾನದ ಕೃಪೆಯಿಂದ ಅವು ಮತ್ತೆ ಆ ಬ್ರಾಹ್ಮಣರ ಮನೆಗಳಿಗೇ ಸೇರಿದುವು. ಬ್ರಾಹ್ಮಣರು ಶ್ರೇಯೋಭಿಲಾಷಿಗಳಾಗಿ ಪರಮಾರ್ಥವನ್ನು ಕುರಿತು ಚಿಂತಿಸದೆ ಸ್ವಾರ್ಥಸಾಧನೆಗೆ ಸಮಯ ಸಿಕ್ಕಿದರೆ ಸಾಕೆಂದಿದ್ದು ಚಿನ್ನದ ಮಾವಿನ ಹಣ್ಣುಗಳ ದಾನವಾಗಬೇಕೆಂದು ಮುಂತಾಗಿ ಹೇಳುವುದು ಉಚಿತವಲ್ಲವೆಂಬುದನ್ನು ವ್ಯಂಗ್ಯವಾಗಿ ತೋರಿಸುವುದಕ್ಕಾಗಿ ರಾಮಲಿಂಗಯ್ಯ ಹೀಗೆ ಮಾಡಿದ.

**ರಂಗ:**— ರಾಮಲಿಂಗಯ್ಯನವರು ಸರ್ವಥಾ ಯೋಗ್ಯ ರೀತಿಯಲ್ಲಿ ವರ್ತಿಸುತ್ತಿಲ್ಲ. ಮಹಾಪ್ರಭುಗಳು ಉದಯಗಿರಿಗೆ ಪ್ರಯಾಣ ಮಾಡಿದುದಕ್ಕೆ ಹಿಂದಿನ ದಿನ ನಡೆದ ತೇಜೋವಧೆಗಿಂತಲೆ ! ತಾತಾಚಾರ್ಯರ ಆ ಕೂಸುಮರಿ ಪ್ರಸಂಗವೊಂದೇ ಸಾಲದೆ ? ರಾಮ ! ರಾಮ ! ಮಹಾಪ್ರಭುಗಳವರಿಗೆ ಗೀತೋಪದೇಶ ಮಾಡಿದ ತಾತಾಚಾರ್ಯರಿಗೆ ತೇಜೋವಧೆಯಾಗಬೇಕೆ ? (ಸಿಂತೇ ಇರುವನು).

**ಕೃಷ್ಣ:**—ತಾತಾಚಾರ್ಯ ಸ್ವಾಮಿಗಳಿಗೆ ತೇಜೋವಧೆಯಾದುದಕ್ಕೆ ಕಾರಣ ?

**ರಂಗ:**—ಧರ್ಮಸಚಿವ ಪದವಿಯ ದುರುಪಯೋಗ. ಧರ್ಮಸಚಿವರು ತಾತಾಚಾರ್ಯರಿಂದ ತಮಗೆ ಉಪಕಾರವಾಗಬೇಕೆಂಬ ವಾಗ್ದಾನವನ್ನು ಪಡೆದರು. ಅನಂತರ ತಾತಾಚಾರ್ಯರನ್ನು ಕುರಿತು 'ನನ್ನನ್ನು ಕೂಸುಮರಿ ಮಾಡಿಕೊಂಡು ಹೋಗಿ ಮನೆಗೆ ಬಿಡಿ' ಎಂದರು. ವಾಗ್ದಾನಕ್ಕೆ ಕಟ್ಟು ಬಿದ್ದು ತಾತಾಚಾರ್ಯರು ಧರ್ಮಸಚಿವರನ್ನು ಬೆನ್ನಿನ ಮೇಲೆ ಕೂಸುಮರಿ ಮಾಡಿಕೊಂಡು ಹೋಗಲು ಪ್ರಯತ್ನಿಸಿದುದನ್ನು ನೋಡಿದವರೆಲ್ಲರೂ ನಕ್ಕರು. ಅವರಿಗೆ ತೇಜೋವಧೆಯಾಯಿತು.

**ಅಲ್ಲಸಾನಿ ಪೆದ್ದನ್ನ:**—(ಎದ್ದು ನಿಂತು) ರಂಗನಾಥ ದೀಕ್ಷಿತರು ಒಂದೆರಡು ಅಂಶಗಳನ್ನು ಅರಿಕೆ ಮಾಡಿಲ್ಲ ಸನ್ನಿಧಾನದಲ್ಲಿ ಕಾವ್ಯಪಠನಕ್ಕಾಗಿ ಅವಕಾಶ ದೊರೆಯಿಸುವುದಾಗಿ ಈಚೆಗೆ ತಾತಾಚಾರ್ಯರು ವರ್ಧಿಷ್ಣುಗಳಾದ ಅನೇಕರಿಗೆ ವಾಗ್ದಾನ ಮಾಡಿ ನೆರವೇರಿಸಲಿಲ್ಲವಂತೆ. ಹಿಂದೆ ರಾಮಲಿಂಗಯ್ಯ ಪಾಂಡುರಂಗ ಮಾಹಾತ್ಮ್ಯವನ್ನು ಬರೆದು ತಂದಿದ್ದಾಗಲೂ ಅದೇ ರೀತಿ ನಡೆಯಿತಂತೆ. ದೀಕ್ಷಿತರು ಹೇಳಿದಂತೆ ನಡೆದುದು ನಿಜ. ಆದರೆ ರಾಮಲಿಂಗಯ್ಯನಿಗೆ ಉಪಕಾರದ ವಾಗ್ದಾನ ಮಾಡಿದ ಮೇಲೆ, ತಾತಾಚಾರ್ಯರು "ಶ್ರೀರಾಮ ಭಕ್ತರು ಸತ್ಯಸಂಧರು. ರಾಮಭಕ್ತನಾದ ನಾನು ಕೊಟ್ಟ ಮಾತಿಗೆ ತಪ್ಪುವುದೇ ಇಲ್ಲ" ಎಂದಾಗ ರಾಮಲಿಂಗಯ್ಯ "ಕೂಸುಮರಿ ಮಾಡಿ" ಎಂದನಂತೆ.

**ಕೃಷ್ಣ:**—(ತಲೆಯ ಮೇಲೊಂದು ಹರಿವಾಣವನ್ನು ಎತ್ತಿ ಹಿಡಿದುಕೊಂಡು ಪ್ರವೇ

ಶಿಸಿದ ಅಪ್ಪಳಾಚಾರ್ಯರನ್ನು ಕುರಿತು) ಏನು, ಈ ನಡಗರ? ಬಹಳ ಹರ್ಷದಿಂದ ಬಂದಿದ್ದೀರಿ!

ಅಪ್ಪಳಾ:—ಸನ್ನಿಧಾನದಲ್ಲಿ ಬಿನ್ನವಿಸಿದ್ದೆನಷ್ಟೆ. ಈ ರಾಮಲಿಂಗಯ್ಯ ನವರು ರಾಮಕೃಷ್ಣನೆಂದು ಹೆಸರಿಟ್ಟುಕೊಂಡು ವೈಷ್ಣವರಾದುದನ್ನು. ಶಿವನಿಗಿಂತ ವಿಷ್ಣು ಹೆಚ್ಚೆಂದು ಅವರು ಬರೆದುಕೊಟ್ಟ 'ಶಿವಾದಪ್ಯಧಿಕೋ-ವಿಷ್ಣುಃ' ಎಂಬ ವಾಕ್ಯದ ಪತ್ರವನ್ನು ಆನೆಯ ಮೇಲಿಟ್ಟು ಮೆರವಣಿಗೆ ಮಾಡಿಸಿದೆ. (ನೇಪಥ್ಯದ ಕಡೆಗೆ ನೋಡಿ) ಅದೋ ಅವರೇ ಬರುತ್ತಿದ್ದಾರೆ. ಸನ್ನಿಧಾನಕ್ಕೆ ಅತ್ತ ಉದಯಗಿರಿ ದಿಗ್ವಿಜಯ. ಇತ್ತ ಈ ಧರ್ಮ ದಿಗ್ವಿಜಯ.

ಕೃಷ್ಣ:—(ರಾಮಲಿಂಗಯ್ಯನು ಪ್ರವೇಶಿಸಿದುದನ್ನು ಕಂಡು) ಬನ್ನಿ ರಾಮ ಲಿಂಗಯ್ಯನವರೆ!..ಅಲ್ಲ..ಅಲ್ಲ..ರಾಮಕೃಷ್ಣಯ್ಯನವರೆ! ತಾವು ವೈಷ್ಣವ ರಾದುದು ಬಹಳ ಸಂತೋಷ.

ರಾಮ:—ಸತ್ಪುರುಷರಿಗೆ ಯಾವ ಮತದ ಮೇಲೂ ಅಭಿಮಾನವಿರ ಬಾರದು. ಇಲ್ಲವೇ ಎಲ್ಲ ಮತಗಳ ಮೇಲೂ ಅಭಿಮಾನವಿರಬೇಕು. ಹೀಗಿ ರುವುದು ಸರ್ವೋತ್ತಮ (ನಗುತ್ತ) ಆತುರಪಟ್ಟರೆ ವೈಷ್ಣವ; ಆಲಸ್ಯದಿಂದ ಮೈಮರೆತರೆ ಸ್ಮಾರ್ತ.

ಕೃಷ್ಣ:—ಹಾಗೆಂದರೆ?

ರಾಮ:—ಆತುರಪಟ್ಟು ಕೆಂಡದ ಮೇಲೆ ನೀರು ಸುರಿದರೆ ಅಂಗಾರ ಸಿದ್ಧ; ಆಲಸ್ಯದಿಂದ ಮೈಮರೆತು ಸುಮ್ಮನಿದ್ದರೆ ವಿಭೂತಿ ಸಿದ್ಧ.

ಕೃಷ್ಣ:—ನೀವು ಬರೆದು ಕೊಟ್ಟ ವಾಕ್ಯವನ್ನು ನೋಡಿದೆವು.

ರಾಮ:—ಸರಿಯೆ! ನನಗೊಂದು ಶಂಕೆ. ಶಿವನಿಗೂ ವಿಷ್ಣುವಿಗೂ ಭೇದವೆಂದೆಣಿಸಿದವರುಂಟೇ ಎಂದು. ಶಂಕರಾಚಾರ್ಯರೇನೋ

**ವಿಧಿಹರಿಹರವಿಭೇದಮಪ್ಯಖಂಡೇ।**
**ಬತ ವಿರಚಯ್ಯ ಬುಧಾನಪಿ ಪ್ರಕಾಮಮ್ ॥**
**ಭ್ರಮಯತಿ ಹರಿಹರ ಭೇದಭಾವಾ।**
**ನಘಟಿತಘಟನಾ ಪಟೀಯಸೀ ಮಾಯಾ ॥**

ಎಂದು ಹೇಳಿಬಿಟ್ಟಿದ್ದಾರೆ. ಇರಲಿ. ಸದ್ಯಕ್ಕೆ ನನ್ನ ಸಾಲಗಳನ್ನೇನೋ ಅಪ್ಪಳಾ ಚಾರ್ಯರು ತೀರಿಸಿದರು. ಅದಕ್ಕಾಗಿ ಕುಯುಕ್ತಿ ಹೂಡಿದರು.

ಕೃಷ್ಣ:—'ಶಿವಾದಪ್ಯಧಿಕೋ ವಿಷ್ಣುಃ' ಎಂದು ನೀವೇ ಬರೆದುಕೊಟ್ಟಿ ರಂತೆ. ಶಿವನಿಗಿಂತ ವಿಷ್ಣು ಹೆಚ್ಚೆಂದು ನೀವೂ ಒಪ್ಪಿದ್ದೀರಲ್ಲ.

ರಾಮ:—ಅವರಿಬ್ಬರನ್ನೂ ನೋಡಿದವರು ಅದನ್ನು ಹೇಳಬೇಕು ಮಹಾ ಸ್ವಾಮಿ!

ಕೃಷ್ಣ:—ಈಗ ನೀವು ಬರೆದುಕೊಟ್ಟಿರುವುದಕ್ಕೆ ಹೇಳಿ.

ರಾಮ:—ನನ್ನ ಮಾತು ಪೂರೈಸಿಲ್ಲ. ಮುಂದಿನ ವಾಕ್ಯ 'ವಿಷ್ಣೋ-ರಪ್ಯಧಿಕೋಽಸ್ಮ್ಯಹಂ' ಎಂದು.

ಕೃಷ್ಣ:—ಇದು ಇನ್ನೂ ಚೆನ್ನಾಯಿತು. 'ಶಿವನಿಗಿಂತ ವಿಷ್ಣು ಹೆಚ್ಚು. ವಿಷ್ಣುವಿಗಿಂತ ನಾನು ಹೆಚ್ಚು' ಎನ್ನುತ್ತೀರಿ. ವಿಷ್ಣುವಿಗಿಂತ ನೀವು ಹೆಚ್ಚೆ?

ರಾಮ:—ಹೌದು ಮಹಾಸ್ವಾಮಿ! ಶಿವನು ಆದ್ಯಂತ ರಹಿತನು. ಆದ ಕಾರಣ ದಶಾವತಾರವನ್ನು ಮಾಡಿದ ವಿಷ್ಣು ಅವತಾರವನ್ನೇ ಅರಿಯದ ಶಿವನಿ ಗಿಂತ ಹೆಚ್ಚು. ಕೋಟಿ ಕೋಟಿ ಜನ್ಮಗಳನ್ನೆತ್ತಿರುವ ನಾನು, ಹತ್ತೇಹತ್ತು ಅವತಾರಗಳನ್ನು ಮಾಡಿರುವ ವಿಷ್ಣುವಿಗಿಂತಲೂ ಹೆಚ್ಚು. 'ಶಿವಸ್ಯೈಕಂ-ಜನ್ಮ ದಶಹರೇಃ ಮಮ ಸಂಖ್ಯಾ ನ ವಿದ್ಯತೇ' ಎಂದು ಹೇಳಬೇಕೆಂದಿದ್ದೆ. (ರಂಗನಾಥ ದೀಕ್ಷಿತ ಮುಂತಾದವರೆಲ್ಲ ನಗುವರು.) ಒಂದು ದೃಷ್ಟಿಯಿಂದ ನೋಡಿದರೆ ಶಿವನೂ ವಿಷ್ಣುವೂ ಒಬ್ಬ ಅಗಸನಿಗಿಂತ ಕಡೆ. ಲಾಲಿಸಬೇಕು. ಅಗಸನ ಕೂಡ ಜಗಳವಾಡಲಾರದೆ ವಿಷ್ಣು ರೇಷ್ಮೆಯ ಪೀತಾಂಬರವನ್ನು ಧರಿಸಿ ದನಂತೆ. ಶಿವನು ತೊಗಲನ್ನು ಹೊದೆದನಂತೆ. ಭೈರವನು ಬೇಸತ್ತು ವಸ್ತ್ರ ವನ್ನೇ ಬೀಸಿ ಎಸೆದುಬಿಟ್ಟು ನಿಶ್ಚಿಂತನಾದನಂತೆ. ಅಗಸನಿಗೆ ಸೋತ ಹರಿಹರರಲ್ಲಿ ಯಾರು ಹೆಚ್ಚಾದರೆ ನಮಗೇನು? ಅಲ್ಲವೆ ಅಪ್ಪಳಾ ಚಾರ್ಯರೆ..?

ಕೃಷ್ಣ:—ಭಟ್ಟಮೂರ್ತಿಕವಿಗಳೇ! ನೀವು ಸಮಸ್ಯೆಯನ್ನು ಕೊಡ ಬೇಕೆಂದಿದ್ದಿರಿ. ಸಮಸ್ಯೆಯೇನು? ಯಾರು ಅದನ್ನು ಪೂರಣ ಮಾಡಬೇಕು.

ಭಟ್ಟ—ಆನೆಗಳು ಸೊಳ್ಳೆಯ ಕೊರಳನ್ನೇರಿ ಅದರ ಆಶ್ರಯದಲ್ಲಿದ್ದು ವೆಂಬ ತಾತ್ಪರ್ಯದ 'ಕುಂಜರಯೂಥಂಬು ದೋಮಕುತ್ತುಕ ನೊಚ್ಚೆನ್'

ಎಂಬುದು ನನ್ನ ಸಮಸ್ಯೆ. ಕವಿಗಂಡ ಪೆಂಡೇರಧಾರಿಗಳಾದ ಅಲ್ಲಸಾನಿ ಪೆದ್ದನ್ನನವರು ಅದನ್ನು ಪೂರಣ ಮಾಡಲಿ.

**ಅಲ್ಲಸಾನಿ:**—ನನ್ನ ಪದತಲದಲ್ಲಿ ಕುಳಿತು ಒಂದೆರಡು ಮಾತು ಕಲಿತ ಈ ಪೋರನೇ ನನಗೆ ಸಮಸ್ಯೆ ಕೊಡುವವನು !

**ಕೃಷ್ಣ:**—ಗುರುಗಳಲ್ಲಿ ಈ ಅಪಚಾರವೆ ? ಅವರು ಸಮಸ್ಯಾಪೂರಣ ಮಾಡಬೇಕೆ ?

**ರಾಮ:**—(ನಕ್ಕು) ಭಟ್ಟಮೂರ್ತಿ ಕವಿಗಳು ಗುರುದಕ್ಷಿಣೆ ಕೊಡುತ್ತಿದ್ದಾರೆ. ಆಗಲಿ. ನಾನು ಸಮಸ್ಯೆಯನ್ನು ಪೂರಣ ಮಾಡುವೆನು.

(ಹಾಡುವನು) **ರಂಜನ ಚೆಡಿ ಪಾಂಡವು ಲರಿ**
**ಭಂಜನುಲೈ ವಿರಟು ಗೊಲ್ವ ಬಾಲ್ಪಡಿ ರಕಟಾ ।**
**ಸಂಜಯ ! ಏಮನಿ ಚೆಪ್ಪುದು**
**ಕುಂಜರಯೂಥಂಬು ದೋಮಕುತ್ತುಕ ಸೊಚ್ಚೆನ್ ॥**

ಇನ್ನು ನಾನು ಕೊಡುವ ಸಮಸ್ಯೆಯನ್ನು ಭಟ್ಟಮೂರ್ತಿಯವರು ಪೂರಣ ಮಾಡಬೇಕು.

( **ಗಂಗಕದ್ದರಿ ಮೇಲಿದ್ದರಿ ಕೀಡುನುಗಂಲದೇ ಯುದ್ಧದ್ರಾಜ ಬಿಂಬಾನನಾ).**

**ಭಟ್ಟ:**—(ಯೋಚಿಸಿ) ನನ್ನಿಂದ ಸಾಧ್ಯವಿಲ್ಲ. ನಾನು ಸೋತೆ. ತಾವೇ ಪೂರಣ ಮಾಡಬೇಕು.

**ರಾಮ:**—ಅಲ್ಲಸಾನಿ ಪೆದ್ದನ್ನನವರಿಗೆ ಸಮಸ್ಯೆ ಕೊಡುವ ಆಯಾಸ ಇನ್ನು ಮೇಲೆ ಬೇಡ. ಅವರು ನಮ್ಮೆಲ್ಲರಿಗೂ ದೊಡ್ಡವರು. ಆಂಧ್ರ ಕವಿತಾ ಪಿತಾಮಹರು. ಇನ್ನು ಈ ಸಮಸ್ಯೆಯ ಮಾತು. ರಸಿಕರಾದ ರಾಜರೊಬ್ಬರಿದ್ದರಂತೆ. ಅವರೊಬ್ಬರು ವೇಶ್ಯೆಯನ್ನು ಸಾಧ್ವೀಮಣಿಯೆಂದು ಭಾವಿಸಿ ಭುವನಮೋಹಿನಿಯಾದ ಆಕೆಯ ಸಮಾನ ಮತ್ತಾರೂ ಇಲ್ಲವೆಂದು ಹೊಗಳಿದರಂತೆ. (ಕೃಷ್ಣದೇವರಾಯನು ಹುಬ್ಬುಗಂಟಿಕ್ಕುವನು) ಅವರ ಧರ್ಮಪತ್ನಿಯರು ಇಬ್ಬರಿಗೂ ಅದರಿಂದ ಬಹಳ ವ್ಯಥೆಯಾಯಿತಂತೆ.

**ಅಲ್ಲಸಾನಿ:**—ಎಷ್ಟಾದರೂ ಬೆಲೆವೆಣ್ಣು. ಕಥೆ ಸ್ವಾರಸ್ಯವಾಗಿದೆ.

**ಕೃಷ್ಣ:**—(ಸ್ವಗತ) ಈ ರಾಮಕೃಷ್ಣಯ್ಯ ಕೃಷ್ಣಾಸಾನಿಯನ್ನು ಕುರಿತು ಹೇಳುವಂತಿದೆ. ಈ ಧೂರ್ತನ ಅಧಿಕಪ್ರಸಂಗವನ್ನು ಕೊನೆಗಾಣಿಸಬೇಕು.

(ಪ್ರಕಾಶ) ರಾಮಕೃಷ್ಣಯ್ಯ! ಸಾಕು, ಸಾಕು, ಈ ಹರಟೆ. ಇದು ಕನ್ನಡ ರಾಜ್ಯ ರಮಾರಮಣನೆಂಬ ಬಿರುದನ್ನು ಪಡೆದಿರುವ ಸಾರ್ವಭೌಮರ ಆಸ್ಥಾನ ವೆಂಬುದನ್ನು ಮರೆತಂತಿದೆ. ನಾನು ಅದರ ನೆನಪು ಬರುವಂತೆ ಮಾಡುತ್ತೇನೆ. ತಾತಾಚಾರ್ಯರೊಡನೆ—ನನಗೆ ಗೀತೋಪದೇಶಮಾಡಿದ ತಾತಾಚಾರ್ಯ ರೊಡನೆ—ಕಲಹ ಮಾಡಿ ಅಪಮಾನ ಮಾಡಿರುವುದು; ಅಪ್ಪಳಾಚಾರ್ಯರು ಮುಂತಾದವರ ತೇಜೋವಧೆ ಮಾಡಿರುವುದು; ಧರ್ಮಸಚಿವನಾಗಿದ್ದೂ ಶಿವನಿಂದೆಯನ್ನೂ ವಿಷ್ಣುನಿಂದೆಯನ್ನೂ ಮಾಡಿರುವುದು; ಭಟ್ಟಮೂರ್ತಿ ಕವಿಗಳ ವಿಚಾರವಾಗಿ ವ್ಯಂಗ್ಯವಾಗಿ ಮಾತನಾಡಿ ಕವಿನಿಂದೆ ಮಾಡಿರುವುದು—ಈ ಅಪರಾಧಗಳಿಗಾಗಿ ನಿನಗೆ ದೇಶಾಂತರವಾಸದ ಶಿಕ್ಷೆಯನ್ನು ವಿಧಿಸಿದ್ದೇನೆ. ವಿಜಯನಗರದಿಂದ ಹೊರಟುಹೋಗಲು ಎರಡೇ ಎರಡು ದಿವಸದ ಅವಧಿ. ಮತ್ತೆ ಮುಖವನ್ನು ತೋರಿಸಿದರೆ ಮರಣದಂಡನೆಯಾಗುವುದು.

**ರಾಮು:**—ಭಟ್ಟಮೂರ್ತಿ ಕವಿಗಳು ಇನ್ನೂ ಚಿಕ್ಕವರು. ದುಡುಕಿ ನಮ್ಮ ಗುರುಗಳಿಗೇ ಸಮಸ್ಯೆ ಕೊಟ್ಟರು. ಅವರು ಕೊಟ್ಟ ಸಮಸ್ಯೆಯನ್ನೆ ಗಾಂಭೀರ್ಯಕ್ಕೆ ಲೋಪ ಬಾರದಂತೆ ಪೂರಣ ಮಾಡಿದೆ. 'ಅರಿಭಂಜನರಾದ ಪಾಂಡವರು ವಿಧಿಯ ಕೋಟಲೆಯಿಂದ ದುರ್ಗತಿಗೀಡಾಗಿ ಅಲ್ಪನಾದ ವಿರಾಟನ ಆಶ್ರಯ ಹೊಂದಿದರು. ಏನು ಹೇಳಲಿ ಸಂಜಯ! ಆನೆಯ ಗುಂಪು ಸೊಳ್ಳೆಯ ಕೊರಳಿನಲ್ಲಿ ಸೇರಿತು' ಎಂದೆ. ಗುರುಗಳಲ್ಲಿ ಅಪಚಾರ ಮಾಡಿದ ನಮ್ಮ ಭಟ್ಟಮೂರ್ತಿ ಕವಿಗಳಿಗೆ ಮೊದಲು ಶಿಕ್ಷೆಯಾಗಬೇಕು; ಆಮೇಲೆ ನನಗೆ.

**ಅಪ್ಪಾಜಿ:**—ಅನುಗ್ರಹವಾಗಬೇಕು. ರಾಮಕೃಷ್ಣಯ್ಯನನ್ನು ಮನ್ನಿಸಬೇಕು. ಆತನು ಧರ್ಮಸಚಿವನಾಗಲು ನನ್ನ ಬಲಾತ್ಕಾರದಿಂದ ಒಪ್ಪಿದನು.

**ರಾಮು:**—ಬೇಡಿ, ಅಪ್ಪಾಜಿ; ಸಮ್ರಾಟರ ಆಜ್ಞೆಯಾದರೆ ತುಂಗಭದ್ರೆಗೆ ಬಿದ್ದು ಪ್ರಾಣ ಬಿಡುವುದಕ್ಕೂ ನಾನು ಸಿದ್ಧನಾಗಿದ್ದೇನೆ. ಇನ್ನು ಮನ್ನಿಸುವುದೇಕೆ? ವಿಜಯ, ವಿನಯ, ವಿದ್ಯಾಭಿಮಾನ, ಧರ್ಮ, ಸತ್ಯ ಎಂಬ ಪಂಚಘಂಟಾನಾದದಿಂದ ಸಾಮ್ರಾಜ್ಯಲಕ್ಷ್ಮಿಯ ಪೂಜೆಯು ನಡೆದೀತೇನೋ ಕಣ್ಣು ತುಂಬ ನೋಡೋಣ—ಎಂತ ಬಂದೆ. ಧರ್ಮ-ಸತ್ಯ ಎಂಬ ಕೊನೆಯ ಘಂಟೆಗಳ ನಾಲಗೆ ಕಚ್ಚಿ ಹೋಗಿದೆ. ಎಷ್ಟಾದರೆ ಅಷ್ಟೇ ಲಭ್ಯ.

**ಕೃಷ್ಣ:**—ಸಾಕು ಈ ಬೆಡಗಿನ ನುಡಿಗಳು.

**ರಾಮ:**—ಓಹೋ! ಸಾಕು (ಸ್ವಗತ) ತಾಯೆ! ಅಪಕಾರಿಗಳಲ್ಲಿಯೂ ನನಗೆ ಉಪಕಾರ ಬುದ್ಧಿಯನ್ನು ಕರುಣಿಸಿ ಕಾಪಾಡು.

(ತೆರೆ ಬೀಳುವುದು)

—

೬

[ಆನೆಗೊಂದಿಯಲ್ಲೊಂದು ಬಯಲು. ವರ್ತಕ ವೇಷಧಾರಿಯಾದ ಇಮ್ಮಡಿ ಭೈರರಸ ಒಡೆಯನು ಇರುವೆಗಳ ಗೂಡಿನ ಸುತ್ತಲೂ ಅಕ್ಕಿಯ ನುಚ್ಚನ್ನು ಹಾಕುತ್ತಾ ಬರುವನು. ಎದುರು ಪಾರ್ಶ್ವದಿಂದ ಬಿಳಿಯ ಗಡ್ಡದ ಜೋಗಿಯೊಬ್ಬನು ಪ್ರವೇಶಿಸುವನು]

**ಗಡ್ಡದ ಜೋಗಿ:**—ಹುಂ. ಹ್ಹೆ ಸಾಧೂ! ಅರೆ ಭಾಯಿ! ಇರುವೆಗಳಿಗೆ ಅಕ್ಕಿ ಹಾಕಬೇಕೆ? ಅವು ಹುಡುಕಿ ತರುತ್ತವೆ. ಅವಕ್ಕೇನು ಕಡಮೆ? ನಮ್ಮಂಥ ಸಾಧುಗಳಿಗೆ ಸಹಾಯ ಮಾಡಬೇಕು. ಈ ಆನೆಗೊಂದಿಯಲ್ಲಿ ಹೀಗಿರುವ ಹುಚ್ಚರೂ ಇದ್ದಾರಲ್ಲಾ!

**ಭೈರರಸ:**— ಎಲಾ ಪುಂಡಾಡಿ! ಧಾಂಡಿಗ. ನಿನ್ನಂಥ ಸಾಧುಗಳಿಗೆ ಸಹಾಯವೆ?

**ಗ.ಜೋಗಿ:**—ಪುಂಡಾಡಿಯಂತೆ, ಧಾಂಡಿಗನಂತೆ. ನಾನು ದುಂಡಗಿರುವುದೇ ತಪ್ಪೆ? ನನ್ನ ಮೈ ನಾನೇ ಹೊರುತ್ತೇನಣ್ಣಾ. ನೀನೇನೂ ಹೊರಬೇಕಾಗಿಲ್ಲ. ನಾನು ಕಂಡುದನ್ನು ಕಂಡ ಹಾಗೆಯೇ ಹೇಳುವ ಸಾಧು. ನೀನೊಬ್ಬ ಪ್ರಭು ಅಲ್ಲವೆ?

**ಭೈರ:**—(ನಕ್ಕು) ನಿಜ! ನಾನೊಬ್ಬ ಪ್ರಭು. ಅದಕ್ಕಾಗಿಯೇ ಊರಿನಿಂದ ಊರಿಗೆ ಅಲೆಯುತ್ತಾ ಈ ಆನೆಗೊಂದಿಗೆ ಬಂದು ವ್ಯಾಪಾರ ಮಾಡಬೇಕೆಂದಿರುವುದು. ನನ್ನ ಮನೆಯ ಆಳುಗಳಿಗೆ ನಾನು ಪ್ರಭು.

**ಗ.ಜೋ:**—ವೇಷವನ್ನು ಮರೆಯಿಸಿಕೊಂಡಿರುವ ಇಮ್ಮಡಿ ಭೈರರಸ ಒಡೆಯರಲ್ಲವೇ ತಾವು? ತಾವು ಗಜಪತಿಮಹಾರಾಜರ ರಾಜಧಾನಿಯಲ್ಲಿ

ಇದ್ದಿರಿ. ಲಾಭ-ನಷ್ಟಗಳ ಗಮನವೇ ಇಲ್ಲದೆ ವ್ಯಾಪಾರಮಾಡುವ ವರ್ತಕ ರಾಗಿದ್ದಿರಿ.

ಭೈರ:—(ಬೆಚ್ಚಿ ದಿಗ್ಭ್ರಮೆಯಿಂದ) ನಾನು ಇಮ್ಮಡಿ ಭೈರರಸ ಒಡೆಯ ನಲ್ಲ. ಯಾರು ಆ ಇಮ್ಮಡಿ ಭೈರರಸ ಒಡೆಯರೆಂಬವರು? ನೀವು ಭ್ರಮಿಸಿರ ಬೇಕು.

**ಗ.ಜೊ:**—ನಾನು ಬೈರಾಗಿಯೂ ಅಲ್ಲ. ತಾವು ಭ್ರಮಿಸಿದ್ದೀರಿ ಭಲಾ ಗಡ್ಡವೆ! ನೀನು ಆಪದ್ಬಾಂಧವ. ಆತ್ಮರಕ್ಷಕ. ನಿನ್ನ ಉಪಕಾರವೇ ಉಪಕಾರ.

ಭೈರ:—(ದಿಟ್ಟಿಸಿ ನೋಡಿ) ರಾಮಲಿಂಗಯ್ಯನವರು! ಗುರುತೇ ತಿಳಿಯ ಲಿಲ್ಲ.

**ಗ.ಜೊ:**—ವೇಷ ಹಾಕಿಕೊಂಡು ಬರುವವರು ಗುರುತು ತಿಳಿಯ ಬೇಕು, ಗುಟ್ಟು ರಟ್ಟಾಗಬೇಕು—ಎಂದು ಬರುತ್ತಾರೇನು? ವಿಷ್ಣುವನ್ನು ಕಂಡಿರುವ ಅಪ್ಪಳಾಚಾರ್ಯರು ನನ್ನನ್ನು ವೀರವೈಷ್ಣವನನ್ನಾಗಿ ಮಾಡಿ ದ್ದಾರೆ. ಈಗ ನನ್ನ ಹೆಸರು ರಾಮಲಿಂಗನಲ್ಲ; ರಾಮಕೃಷ್ಣ, ತೆನಾಲಿ ರಾಮ ಕೃಷ್ಣ.

ಭೈರ:—(ನಕ್ಕು) ಆದಿರಲಿ. ಕೃಷ್ಣದೇವರಾಯರ ಜೀವಕ್ಕೆ ಸಂಚಕಾರ. ಅಪಾಯ ಒದಗುವುದರಲ್ಲಿದೆ.

**ರಾಮ:**—ಅಪಾಯವೆಲ್ಲಾ ದೇಹಕ್ಕೆಂದು ಹೇಳಿ. ಅವರು ಇನ್ನೆಷ್ಟು ದಿನ ಬದುಕಿರಬೇಕು ಪಾಪ! ಪಾಪ! ಬೇರೆ ದೇಹ ಬರಲಿ.

ಭೈರ:—(ಸೊಂಟದಿಂದ ಕಠಾರಿಯನ್ನು ಹಿಡಿದು) ನೀಚ! ದ್ರೋಹಿ! ಏನೆಂದೆ? ನಾಲಗೆಯನ್ನೇ ಸೀಳಿಬಿಡುವೆನು. ಜೋಕೆ!

**ರಾಮ:**—ಮೊದಲು ನಿಮ್ಮ ಪ್ರಿಯರಾದ ಬಸವರಸ ಒಡೆಯರ ನಾಲಗೆ ಯನ್ನು ಸೀಳಿದ ಮೇಲೆ ತಾನೇ ನನ್ನ ನಾಲಿಗೆ ಸೀಳುವುದು! ಸ್ವಾಮಿ ಭಕ್ತಿಯ ಜೀವರತ್ನ ತಮ್ಮ ಹೃದಯದಲ್ಲಿ ಭದ್ರವಾಗಿದೆ. ಸಂತೋಷ. ಎಷ್ಟು ಕೋಪವಪ್ಪಾ, ಈ ಕತ್ತಿ ಹಿಡಿಯುವ ಜನಕ್ಕೆ! ಕೃಷ್ಣದೇವರಾಯರ ಕಣ್ಣು ಗಳನ್ನುಳಿಸಲು ಕಣ್ಣು ಕಳೆದುಕೊಳ್ಳುವುದಕ್ಕೆ ಸಿದ್ಧನಾಗಿದ್ದ ಸ್ವಾಮಿಭಕ್ತ ನಾನು. ನಿಮ್ಮ ಮನಸ್ಸನ್ನು ಪರೀಕ್ಷಿಸಲು ಹಾಗೆ ಹೇಳಿದೆ.

ಭೈರ:—ಮಹಾನುಭಾವ ! ನೂರು ಕಾಲ ಸುಖವಾಗಿರಿ. ಬಸವರಸ ಒಡೆಯರ ಸ್ವಭಾವ ನಿಮಗೆ ತಿಳಿಯದು. ನಾನು ಜೀವಿಸಿಲ್ಲನೆಂಬ ತಪ್ಪು ತಿಳಿವಳಿಕೆಯಿಂದ ಹೀಗೆ ಗೊಂದಲದಲ್ಲಿ ಬಿದ್ದಿರಬೇಕು.

ರಾಮ:—ಪ್ರಪಂಚದ ತಲೆ-ಕೆಳಕು ವ್ಯಾಪಾರಗಳಿಗೆಲ್ಲಾ ತಪ್ಪುತಿಳಿವಳಿಕೆಯೇ ಮೂಲ. ತಪ್ಪುತಿಳಿವಳಿಕೆಯು ಭೂತವೊಂದಿಲ್ಲದಿದ್ದರೆ ಜನರೆಲ್ಲಾ ಬಂಗಾರದ ಗಟ್ಟಿಗಳೇ. ಕೃಷ್ಣದೇವರಾಯರು ನನಗೆ ದೇಶಾಂತರ ವಾಸದ ಶಿಕ್ಷೆಯನ್ನು ವಿಧಿಸಿರುವುದೂ ತಪ್ಪುತಿಳಿವಳಿಕೆಯಿಂದಲೇ.

ಭೈರ:—ಏನು ? ನಿಮಗೆ ದೇಶಾಂತರವಾಸ ಶಿಕ್ಷೆಯೆ ? ನಿಮಗೆ ?

ರಾಮ:—ನನಗೆ. ನನಗೆ. ನನ್ನದೇನು ಹೆಚ್ಚು ? ನನ್ನ ಮುಖವನ್ನು ತೋರಿಸಿದರೆ ನನ್ನ ತಲೆಯನ್ನೇ ಹಾರಿಸುವುದಾಗಿ ಹೇಳಿದ್ದಾರೆ. ನಾನು ಹಗಲು ವೇಷಧಾರಿಯಾಗಿ ಊರೊಳಗೆ ಅಲೆಯುತ್ತಿದ್ದೇನೆ. (ಸುತ್ತಲೂ ನೋಡಿ ಮೆಲ್ಲಗೆ) ರಾಯರಿಗೆ ಅಪಾಯವೆಂದಿರಿ. ಏನು ಆ ವಿಷಯ ?

ಭೈರ:—(ಸುತ್ತಲೂ ನೋಡಿ) ಕೃಷ್ಣದೇವರಾಯರನ್ನು ಕೊಲ್ಲುವ ಪ್ರಯತ್ನವು ಬಹು ಬೇಗ ನಡೆಯುವುದಾಗಿದೆ. (ರಾಮಕೃಷ್ಣನ ಕಿವಿಯಲ್ಲಿ) ಹೀಗಿದೆ ವಿಚಾರ. ಆದರೆ ಎಂದು ಯಾವ ರೀತಿ ಕೊಲ್ಲುವರೆಂಬುದು ಮಾತ್ರ ತಿಳಿದಿಲ್ಲ. ಅಪ್ಪಾಜಿಯವರು ಈ ವಿಷಯವನ್ನರಿಯರು. ನಾನು ವಿಜಯನಗರಕ್ಕೆ ಉತ್ಸಾಹದಿಂದ ಬಂದೆ. ಆದರೆ ಅವರು ಈಗ ವಿಜಯನಗರದಲ್ಲಿಲ್ಲ. ಅವರು ಬಂದೊಡನೆಯೆ ಈ ಸಂಗತಿಯನ್ನು ತಿಳಿಸಬೇಕೆಂದಿದ್ದೇನೆ. ಅವರ ಸಲಹೆಯನ್ನು ಕೇಳಿದಲ್ಲದೆ, ಬಸವರಸ ಒಡೆಯರನ್ನು ಕಾಣಲು ನನಗೆ ಇಷ್ಟವಿಲ್ಲ.

ರಾಮ:—ಸರಿಯಾದ ಸಂಗತಿಗಳು ತಿಳಯದೆ ಅಪ್ಪಾಜಿಯವರಿಗೆ ಹೇಳುವುದು ಉಚಿತವಲ್ಲ. . ಒಳಸಂಚಿನ ಹಲವು ಸಂಗತಿಗಳು ನನಗೂ ಗೊತ್ತಿವೆ. ಉಳಿದುವನ್ನು ತಿಳಿದುಕೊಳ್ಳಲು ಹಗಲಿರುಳೂ ಪ್ರಯತ್ನಿಸುತ್ತಿದ್ದೇನೆ.

ಭೈರ:—ಕಾರಣ ? ಕೃಷ್ಣದೇವರಾಯರು ತಮಗೆ ಶಿಕ್ಷೆ ವಿಧಿಸಿರುವುದು ಸುಳ್ಳೇನು, ಹಾಗಾದರೆ ?

ರಾಮ:—ಶಿಕ್ಷೆ ವಿಧಿಸಿರುವುದು ನಿಜ. ಆದರೇನಂತೆ ? ಸಾವಿಗೂ ಸಿದ್ಧನಾಗಿ ಅವರನ್ನುಳಿಸುವ ಪ್ರಯತ್ನ ಮಾಡುತ್ತೇನೆ. ಆ ತಾಯಿ ಕೃಪೆ ಮಾಡಿ

ದರೆ ರಾಯರಿಗೆ ಸಾವಿನ ಭಯವಿಲ್ಲ. ರಾಯರು ಕನ್ನಡಿಗರ ಭಾಗ್ಯ. ಅವರು ಜೀವದಿಂದಿದ್ದರೆ ಸಾಕು. ನನಗೆ ಸಾವೂ ಸುಖಕರ.

ಭೈರ:—(ದಂಡಪ್ರಣಾಮ ಮಾಡಿ, ನಿಂತು) ತಾವು ನಿಜವಾಗಿಯೂ ನರಾಕೃತಿಯನ್ನು ತಾಳಿರುವ ಪರಮೇಶ್ವರ ಸ್ವರೂಪರು.

ರಾಮ:—(ನಕ್ಕು) ಪರಮೇಶ್ವರ ತನ್ನ ರೂಪ ಹೇಗಿದೆಯೆಂತ ಮನುಷ್ಯರಿಗೆ ತೋರಿಸಲು ನನ್ನನ್ನೇ ಆರಿಸಿರಬೇಕು. ಆತನಿಗೆ ಮತ್ತಾರೂ ದೊರೆಯುವಂತಿಲ್ಲ, ನೋಡಿ.

ಭೈರ:—ಅಪ್ಪಾಜಿಯವರಿಂದ ಉಪಕಾರ ಪಡೆದವನು ನಾನು. ನನ್ನ ಕುಟುಂಬದವರನ್ನು ಕಾಣುವ ಕಾಲವು ಸಮೀಪಿಸಿತೆಂದು ಹರ್ಷಿಸುತ್ತಿರುವವನು ನಾನು. ನಾನು ಸ್ವಾಮಿಭಕ್ತಿಯನ್ನು ತೋರಿಸುವುದರಲ್ಲಿ ಆಶ್ಚರ್ಯವಿಲ್ಲ. ಆದರೆ, ಅಪಕಾರ ಮಾಡಿದವರಿಗೂ ಉಪಕಾರ ಮಾಡಲು ಹೊರಟಿರುವ ತಾವು ನಿಜವಾಗಿಯೂ ಪರಮೇಶ್ವರ ಸ್ವರೂಪರು.

ರಾಮ:—(ನೇಪಥ್ಯದ ಕಡೆ ನೋಡಿ) ಅಲ್ಲಿ ನೋಡಿ, ಯಾರೋ ಬರುತ್ತಿದ್ದಾರೆ. ಈ ಹೊಗಳಿಕೆಯೆಲ್ಲಾ ನಿಧಾನವಾಗಿ ನಡೆಯಲಿ. ನಾನು ತಮ್ಮೊಡನೆ ಮಾತನಾಡಬೇಕಾದ ಕೆಲವು ಮುಖ್ಯ ವಿಚಾರಗಳಿವೆ. ಬನ್ನಿ ಹೋಗೋಣ.

(ಹೋಗುವರು)

—

## ದೃಶ್ಯ ೭

[ಅರಮನೆಯಲ್ಲಿ ನಾಟ್ಯಶಾಲೆಗೆ ಹೋಗುವ ಮಾರ್ಗ. ಅನರ್ಘ್ಯವಾದ ವಸ್ತ್ರಾಭರಣ ಭೂಷಿತೆಯಾಗಿ, ವೀರಗಾಸೆಯಿಂದ ಕೂಡಿ ಚಿನ್ನಾದೇವಿಯು ಪ್ರವೇಶಿಸುವಳು. ಆಕೆಯ ಹಿಂದೆ ಕೃಷ್ಣದೇವರಾಯನು ಪ್ರವೇಶಿಸುವನು]

ಕೃಷ್ಣ:—ಚಿನ್ನಾ! ನಿನ್ನ ವೇಷ-ಭೂಷಣಗಳೆಷ್ಟು ರಮಣೀಯವಾಗಿವೆ! ನಿನ್ನನ್ನು ಎಷ್ಟು ನೋಡಿದರೂ ತೃಪ್ತಿಯೇ ಆಗದು.

ಚಿನ್ನಾ:—ಅಕ್ಕನೂ ಹೀಗೆಯೇ ಹೇಳಿವರು. ನನಗೆ ಬಹಳ ಸಂತೋಷವಾಯಿತು.

ಕೃಷ್ಣ:—ನನ್ನಿಂದಲ್ಲವೇ ತಿರುಮಲದೇವಿ ನಿನಗೆ ಅಕ್ಕನಾಗಿರುವುದು? ನನ್ನ ಮೆಚ್ಚಿಕೆಗಿಂತ ಅವಳ ಮಾತಿನಲ್ಲಿ ನಿನಗೆ ಹೆಚ್ಚು ಹರ್ಷವೆ?

ಚಿನ್ನಾ:—ಅಕ್ಕನವರದು ಅಗಾಧ ಪ್ರೇಮ. ಅನನ್ಯ ಸ್ವಾರ್ಥತ್ಯಾಗ. ಸಾರ್ವಭೌಮರ ಪ್ರೀತಿಯು....(ನಗುತ್ತ) ಇನ್ನೊಬ್ಬ ಕೃಷ್ಣಾಸಾನಿಯನ್ನು ಕಾಣುವ ವರೆಗೆ ಮಾತ್ರ. ಅಕ್ಕನವರ ಪ್ರೀತಿ ಹಾಗಲ್ಲ. ಅದು ಶಾಶ್ವತ.

ಕೃಷ್ಣ:—ಕರ್ಣಕಠೋರವಾಗಿದೆ. ಆ ನೀಚಳ ಮಾತು ಬೇಡ.

ಚಿನ್ನಾ:—(ನಗುತ್ತ) ನಾನು ಹೇಳಿದುದು ಆ ಕೃಷ್ಣಾಸಾನಿ ಮಾತನ್ನಲ್ಲ. ಇನ್ನೊಬ್ಬರು—ಕೃಷ್ಣಾಸಾನಿಯೋ ಯಾವಳೋ—ಸಾರ್ವಭೌಮರ ಕಣ್ಣಿಗೆ ಬಿದ್ದರೆ—ಅವಳ ಮಾತು. ಕೃಷ್ಣಾಸಾನಿಯನ್ನು ನೀಚಳೆನ್ನಬೇಡಿ. ರಾಮ ಕೃಷ್ಣಯ್ಯನವರು ಸಾಧುವಿನ ವೇಷವನ್ನು ಧರಿಸಿ ಕರೆದಾಗ ಅವರು ಪ್ರದರ್ಶಿಸಿದ ವಿರಕ್ತಭಾವವನ್ನು ಹೊಗಳಿದಳು. ಸುವರ್ಣಯೋಗವನ್ನು ಕಲಿಯುವ ಆಕಾಂಕ್ಷೆಯಿಂದ ಅವರಿಗೆ ಸತೀತ್ವವನ್ನು ಕೊಡಲು ಸಿದ್ಧವಾದ ಚಾಪಲ್ಯವನ್ನು ಒಪ್ಪಿಕೊಂಡಳು. ಅದು ದೊಡ್ಡ ಗುಣವಲ್ಲವೇನೊ? ಮಾಡಿದ ಅಪರಾಧವನ್ನು ಒಪ್ಪಿಕೊಳ್ಳುವುದೂ ದೊಡ್ಡ ಗುಣ. ಅದಕ್ಕೇ ನಾನು ಅವಳಿಗೆ ವಜ್ರಹಾರವನ್ನು ಕೊಟ್ಟೆ. ಅವಳ ಗೋಳಾಟವನ್ನು ನೋಡಿ ವ್ಯಥೆಯಾಯಿತು. ಆತ ಅವಳನ್ನು ತಂಗಿಯಂತೆ ಕಂಡಿದ್ದಾನೆ.

ಕೃಷ್ಣ:—(ನಿಟ್ಟುಸಿರು ಬಿಟ್ಟು) ಇನ್ನೆಲ್ಲಿ ನನ್ನ ರಾಮಕೃಷ್ಣ? ನಾನು ದುಡುಕಿದೆ. ದುಡುಕಿದೆ. ಚಿನ್ನಾ! ಏನೋ ಸಂಶಯ ಬಂದು ಮತ್ಸರದ ಕಿಚ್ಚು ಹೃದಯದಿಂದೆದ್ದಿತು. ಅಪ್ಪಾಜಿಯವರ ಸಲಹೆಯನ್ನೂ ಕೇಳದೆ ಅನ್ಯಾಯ ಮಾಡಿದೆ. ರಾಮಕೃಷ್ಣಯ್ಯನನ್ನು ಎಷ್ಟೆಷ್ಟು ಹುಡುಕಿಸಿದರೂ ಸಿಕ್ಕಲಿಲ್ಲ. ಅವನು ಜೀವಂತನಾಗಿರುವುದೇ ಸಂಶಯವಾಗಿದೆ. ಈಗ ಅವನನ್ನು ಕಾಣುವುದಾದರೆ ನನ್ನ ರಾಜ್ಯವನ್ನೇ ಕೊಟ್ಟೇನು. ನಿರಪರಾಧಿ ರಾಮ ಕೃಷ್ಣಯ್ಯ.

ಚಿನ್ನಾ:—ಉದಯಗಿರಿಯನ್ನು ಗೆದ್ದುಬಂದುದಕ್ಕಾಗಿ ನಡೆಯುವ ಈ ಆನಂದೋತ್ಸವದ ದಿನ ನಾನು ಅದೆಲ್ಲಾ ನೆನಪಿಗೆ ಬರುವಂತೆ ಮಾಡಿದುದು ಸರ್ವಾಪರಾಧವಾಯಿತು. ಇನ್ನು ಅಕ್ಕನವರೊಡನೆ ನಾಟ್ಯಶಾಲೆಗೆ ಹೋಗಿ

ಗೀತಗೋವಿಂದದ ಅಭಿನಯವನ್ನು ನೋಡೋಣ. ಅಕ್ಕನವರು ಅಂತಃಪುರ ದಲ್ಲಿ ಕಾದಿರುವರು. ಹೋಗೋಣ ನಡೆಯಿರಿ.

**ಕೃಷ್ಣ**:—ಜ್ಞಾನಿ. ಭಕ್ತ. ನಿರಪರಾಧಿ. ಅವನಿಗೆ ಶಿಕ್ಷೆ ವಿಧಿಸಿದೆನೇ ನಾನು ! ಪರಮಾತ್ಮ ! ನನ್ನ ಸಂಕಟವನ್ನು ಪರಿಹರಿಸಿ ದಯೆ ತೋರು.

(ಹೋಗುವರು)

**ಜಕ್ಕಣ್ಣ**:—(ಪ್ರವೇಶಿಸಿ) ಭಲೇ, ಉತ್ಸವ ಎಂದರೆ ಈ ಉತ್ಸವ. (ನೇಪಥ್ಯದ ಕಡೆ ನೋಡಿ) ಯಾರಯ್ಯಾ ನೀನು ? ಈ ಹೊತ್ತಿನಲ್ಲಿ ? ಇಲ್ಲಿ ಬಾರಯ್ಯ, ಗಡ್ಡದ ಜೋಗಿ.

**ಜೋಗಿ**:—(ಪ್ರವೇಶಿಸಿ) ಇವೊತ್ತು ಅರಮನೆಯಲ್ಲಿ ಆಟವಂತೆ. ನಾನೂ ನೋಡಬೇಕು.

**ಜಕ್ಕಣ್ಣ**:—ಬಾರಯ್ಯಾ. ಬಾ. ಬಾ. ನೀನೂ ಬಂದೀಯಾ ಅಂತ ಕಾದಿದ್ದೆ. ಅಪ್ಪಾಜಿಯವರೂ ಕಾದಿರಬಹುದು. ಸಾರ್ವಭೌಮರು ಸಿಂಹಾಸನ ವನ್ನೇ ಬಿಟ್ಟುಕೊಟ್ಟು, ಅದರ ಮೇಲೆ ನಿನ್ನ ಕೂಡಿಸಬಹುದು. ನಿನ್ನ ಒಳಕ್ಕೆ ಬಿಟ್ಟವರ ಗತಿ ನೋಡುವೆಯಂತೆ.

**ಜೋಗಿ**:—ಅವರ ಗತಿ ನೋಡುವುದು ಹಾಗಿರಲಿ. ಅದಕ್ಕೆ ಆತುರವಿಲ್ಲ. ಇವೊತ್ತು ಸಾರ್ವಭೌಮರ ಗತಿ ನೋಡಬೇಕಲ್ಲಯ್ಯಾ. ನಾನೂ ನೀನೂ ಸೇರಿ ಅವರ ಜೀವ ಉಳಿಸಬೇಕು.

**ಜಕ್ಕಣ್ಣ**:—ಪ್ರತಾಪರುದ್ರ ಗಜಪತಿಗಳ ಉದಯಗಿರಿ ಕೋಟೆಯನ್ನೇ ಗೆದ್ದು ಬಂದಿರುವ ವೀರಶಿಖಾಮಣಿಗಳ ಜೀವ, ಈ ಗಡ್ಡದ ಜೋಗಿ, ನಾನು, ಇಬ್ಬರೂ ಉಳಿಸಬೇಕು. ಭಲಾ ! ಭಲಾ ! ನಿನ್ನ ಧ್ವನಿ ಎಲ್ಲಿಯೋ ಕೇಳಿರುವ ಹಾಗಿದೆಯಲ್ಲಯ್ಯಾ ?

**ಜೋಗಿ**:—ನನ್ನ ಧ್ವನಿ ಬೇಕಾದಷ್ಟು ಕೇಳಿದ್ದೀಯೆ. ನನ್ನ ನೋಡಿಯೂ ಇದ್ದೀಯೆ. ನಾನು ತೆನಾಲಿ ರಾಮಕೃಷ್ಣ.

**ಜಕ್ಕಣ್ಣ**:—ಅಯ್ಯೋ, ನನ್ನೊಡೆಯಾ ! ತಾವೆ ! ಎಲ್ಲಿ ಹೋಗಿಬಿಟ್ಟಿದ್ದಿರಿ ಇಷ್ಟು ದಿನವೂ ! ಎಷ್ಟು ಸಲ ನನ್ನ ಸಮಯಕ್ಕೆ ಕೇಳಿಕೇಳಿದಷ್ಟು ಹಣ ಕೊಟ್ಟಿದ್ದೀರಿ ! ಎಷ್ಟು ಸಹಾಯ ಮಾಡಿದ್ದೀರಿ. ಆಸ್ಥಾನದಾಗೆ ಎಲ್ಲರನ್ನೂ ಎಷ್ಟು ನಗಿಸುತ್ತಾ ಇದ್ದಿರಿ.

ರಾಮ:—ನಾವೆಲ್ಲಾ ಆ ತಾಯಿಗೆ ಸಾಲಗಾರರು, ಜಕ್ಕಣ್ಣಾ. ನೀನೇನೋ ಸಾಲವೇತಲೇ ತೆಗೆದುಕೊಂಡೆ. ಆದರೆ ನಾನು ಸಾಲವೆಂತ ಕೊಡಲಿಲ್ಲ. ಆದ ಕಾರಣ ನೀನು ಸಾಲವನ್ನೇನೂ ತೀರಿಸಬೇಕಾಗಿಲ್ಲ. ಸಾರ್ವಭೌಮರಿಗೆ ಗೀತಗೋವಿಂದವೆಂದರೆ ಪ್ರಾಣ. ಶತ್ರುಗಳ ಒಳಸಂಚಿನಿಂದ ಗೀತಗೋವಿಂದದ ಅಭಿನಯದ ಸನ್ನಿವೇಶದಿಂದಲೇ ಅವರ ಪ್ರಾಣಕ್ಕೆ ಸಂಚಕಾರ ಬರುವಂತಿದೆ. ನೀನು ನನ್ನನ್ನು ಒಳಕ್ಕೆ ಬಿಡು.

ಜಕ್ಕಣ್ಣ:—ಒಬ್ಬರನ್ನೂ ಬಿಡಕೂಡದೆಂದು ಅಪ್ಪಣೆಯಾಗಿದೆ.

ರಾಮ:—ಜಕ್ಕಣ್ಣಾ! ನಾನು ನಿಮ್ಮ ಗುರುಗಳೆಂದು ಹೇಳು. ಹಿಂದಿನ ಬಾಗಿಲಿನಿಂದ ನಾನು ನಾಟ್ಯಶಾಲೆಯೊಳಕ್ಕೆ ಹೋಗುವಂತೆ ಮಾಡು. ಪಾತ್ರ-ಧಾರಿಗಳೂ, ವಾದ್ಯಗಾರರೂ ಇತರರೂ ನಾನು ಅರಮನೆಯವನೆಂದು ಸುಮ್ಮನಿರುತ್ತಾರೆ. ನಾನು ಸಮಯವನ್ನು ನಿರೀಕ್ಷಿಸಿದ್ದು ಕಾರ್ಯವನ್ನು ಸಾಧಿಸಿ ಕೊಲೆಯನ್ನು ತಪ್ಪಿಸುತ್ತೇನೆ.

ಜಕ್ಕಣ್ಣ:- ಹೌದು ನನ್ನೊಡೆಯ. ನನಗಪ್ಪಣೆಯಿಲ್ಲವಲ್ಲಾ!

ರಾಮ:—ನಿನ್ನ ಪ್ರಾಣವು ಹೋಗುವುದಾದರೆ ನನ್ನ ಪ್ರಾಣವನ್ನು ಮೊದಲು ಬಲಿಕೊಟ್ಟು ನಿನ್ನನ್ನು ಉಳಿಸುತ್ತೇನೆ. ಅಥವಾ ನಾವಿಬ್ಬರೂ ಸಾಯಬೇಕಾದರೆ ಅದಕ್ಕೂ ಸಿದ್ಧವಾಗೋಣ. ಜಕ್ಕಣ್ಣಾ! ಈ ಎರಡು ದೇಹಗಳೂ ಅವರ ಉಪ್ಪು ತಿಂದಿವೆ. ಅವರ ಹಣದಿಂದ ಬೆಳೆದಿವೆ. ಸ್ವಾಮಿಯ ಪ್ರಾಣವನ್ನುಳಿಸಲು ನಮ್ಮ ತಲೆಗಳನ್ನೊಪ್ಪಿಸೋಣ. ಎಂದಿದ್ದರೂ ಸಾಯ ಬೇಕು. ಇವೊತ್ತೇ ಸಾಯೋಣ. ಅಪರಾಧಿಗಳನ್ನು ಹಿಡಿಯಲು ಬಿಚ್ಚು-ಕತ್ತಿಯವರು ಮಾತ್ರ ಸಿದ್ಧರಾಗಿರಲಿ.

ಜಕ್ಕಣ್ಣ:—ಆಗಲಿ ನನ್ನೊಡೆಯ! ನಿಮ್ಮಂಥವರೊಡನೆ ಸಾವೂ ದೀವಳಿಗೆ ಹಬ್ಬ.

(ಹೋಗುವರು)

[ತೆರೆ ಬೀಳುವುದು]

—

## ದೃಶ್ಯ ೮

[ನಾಟ್ಯಶಾಲೆ. ಕೃಷ್ಣದೇವರಾಯರು (ಅವರ ಬಲಗಡೆಗೆ) ತಿರುಮಲಾಂಬೆ, (ಎಡಗಡೆಗೆ) ಚಿನ್ನಾದೇವಿ. ಈ ಮೂವರೂ ಒತ್ತಟ್ಟಿಗೆ ಕುಳಿತಿರುವರು. ಒತ್ತಟ್ಟಿಗೆ ಅಪ್ಪಾಜಿ, ರಾಮನಾಯಕ, ಇಮ್ಮಡಿ ಭೈರರಸ ಒಡೆಯ, ಅಪ್ಪಳಾಚಾರ್ಯ, ತಾತಾಚಾರ್ಯ, ರಂಗನಾಥ ದೀಕ್ಷಿತ, ಬಸವರಸ ಮುಂತಾದವರು ಕುಳಿತಿರುವರು. ರಂಗಸ್ಥಳದೊಳಗಿನ ರಂಗಸ್ಥಳದ ಮೇಲೆ ಗೀತಗೋವಿಂದದ ಅಭಿನಯವು ನಡೆಯುತ್ತಿರುವುದು]

**ರಾಧೆಯ ಸಖಿ**:—(ರಾಧೆಯನ್ನು ಕುರಿತು)

> **ಧೀರಸಮೀರೇ ಯಮುನಾತೀರೇ ವಸತಿ ವನೇ ವನಮಾಲೀ ।**
> **ಗೋಪೀ ಪೀನಪಯೋಧರ ಮರ್ದನ ಚಂಚಲ ಕರಯುಗಶಾಲೀ ॥**
> **ನಾಮಸಮೇತಂ ಕೃತಸಂಕೇತಂ ವಾದಯತೇ ಮೃದುವೇಣುಮ್ ।**
> **ಬಹುಮನುತೇऽ ತನು ತೇ ತನುಸಂಗತ ಪವನಚಲಿತಮಪಿ ರೇಣುಮ್॥**

(ರಾಮಕೃಷ್ಣನು ನೋಡುತ್ತಿರಲು ಕೃಷ್ಣವೇಷಧಾರಿಯು 'ಅಯ್ಯೋ, ಹೋದೆ ಹೋದೆ' ಎಂದುಕೊಂಡು ಓಡಿಬರುವನು. ರಾಮನಾಯಕನೂ ಅವನ ಅನುಚರರೂ ಅವರೀರ್ವರನ್ನೂ ಹಿಡಿದು ನಿಲ್ಲಿಸುವರು)

**ಕೃಷ್ಣ**:—(ಕ್ರುದ್ಧನಾಗಿ) ಯಾರಿವನು ? ಸಿಂಹವನ್ನು ಕೆಣಕಿ ಸೆಣಸಲಿಚ್ಛಿಸುವವನು ?

**ರಾಮ**:—(ಧ್ವನಿಯನ್ನು ಮಾರ್ಪಡಿಸಿಕೊಂಡು) ಸಾವಿಗೂ ಸಿದ್ಧನಾಗಿರುವ ಸ್ವಾಮಿಭಕ್ತನು.

**ಕೃಷ್ಣ**:—ಆಹಾ ! (ವ್ಯಂಗ್ಯವಾಗಿ) ವಿಲಕ್ಷಣವಾದ ಸ್ವಾಮಿಭಕ್ತಿಯೆ !.. ಸೊಗಸಾಗಿ ನಡೆಯುತ್ತಿದ್ದ ಅಭಿನಯದ ಮಧ್ಯದಲ್ಲಿ ರಸಾಭಾಸ ಮಾಡಿ ಅಪರಾಧವನ್ನಾಚರಿಸುವುದಕ್ಕೂ ಸ್ವಾಮಿಭಕ್ತಿಯೆಂಬ ಹೆಸರೇ ಅಲ್ಲವೆ ?

**ರಾಮ**:—(ಉದ್ವೇಗವೇನೂ ಇಲ್ಲದೆ) ನಿಜ ! ಸ್ವಾಮಿಯ ಪ್ರಾಣರಕ್ಷಣೆಗಾಗಿ ರಸಾಭಾಸ ಮಾಡಬೇಕಾಯಿತು.

**ಕೃಷ್ಣ**:—ಹಾಗೆಂದರೆ ? ಬೇಗ ತಿಳಿಸು. ನಿನ್ನ ಹರಟೆಯನ್ನು ಕೇಳಲು ಈಗ ಸಮಯವಿಲ್ಲ.

**ರಾಮ:**—ಏನೂ ಇಲ್ಲ. ಒಂದೆರಡೇ ಮಾತುಗಳಲ್ಲಿ ಮುಗಿಸುತ್ತೇನೆ. ಮಹಾಪ್ರಭುಗಳನ್ನು ಕೊಲ್ಲುವ ಒಳಸಂಚು ನಡೆಯಿತು. ಗೀತಗೋವಿಂದದ ಮೇಲೆ ಪ್ರಭುಗಳಿಗಿರುವ ಪ್ರೇಮವೇ ಒಳಸಂಚು ಮಾಡಿದವರ ಬಲೆಯಾಯಿತು. ಈ ಕೃಷ್ಣವೇಷಧಾರಿಯು ಸೊಂಟವನ್ನು ವಿಷಮಯವಾದ ಕಠಾರಿಯು ಅಲಂಕರಿಸಿದೆ. ಈ ಮಹಾನುಭಾವನಾದ ಕೃಷ್ಣಪರಮಾತ್ಮನು ರಂಗಸ್ಥಳದ ಮೇಲೆ ಬಂದು, ಗಾನ ಮಾಡುತ್ತ ನಿರೀಕ್ಷೆಯಿಂದಿದ್ದ ಹೂವಿನ ಹಾರ ಹಾಕುವ ಸೋಗಿನಿಂದ ಪ್ರಭುಗಳ ಬಳಿಗೆ ಬಂದು ಪ್ರಭುಗಳನ್ನು ಇರಿಯಬೇಕೆಂದೂ ಆ ವೇಳೆಗೆ ಗಜಪತಿಮಹಾರಾಜರ ಕಡೆಯವರು ಭಾಗವತರ ಆಟದ ವೇಷಧಾರಿಗಳಾದ ಇವರ ಸಂಜ್ಞೆಯಾದಂತೆ ನಾಟ್ಯಶಾಲೆಯ ಮೇಲಣ ಹಗಲು ಬತ್ತಿಯ ಬೆಳಕನ್ನು ಕಂಡೊಡನೆ ಸೈನ್ಯ ಸಮೇತರಾಗಿ ಬಂದು ಮುಂದಣ ಕಾರ್ಯಗಳನ್ನು ನೆರವೇರಿಸಬೇಕೆಂದೂ ಗೊತ್ತಾಗಿದ್ದಿತು.

**ಕೃಷ್ಣ:**—ನಿಜವೆ? ಈತನಲ್ಲಿ ಕಠಾರಿ ಇರುವುದೆ? ಪರೀಕ್ಷಿಸಿ ನೋಡಿ.

**ಅಪ್ಪಾಜಿ:**—(ಪರೀಕ್ಷಿಸಿ, ಕಠಾರಿಯನ್ನು ಸೊಂಟದಿಂದ ಹಿರಿದು ತೆಗೆದು) ಇದೆ ಮಹಾಸ್ವಾಮಿ!

**ಕೃ. ವೇಷಧಾರಿ:**—ಮ....ಹಾ....ಮಹಾಸ್ವಾಮಿ....ತ.... ತಪ್ಪಾ..ಯಿತು.

**ಕೃಷ್ಣ:**—(ರಾಮಕೃಷ್ಣನನ್ನುದ್ದೇಶಿಸಿ) ಆಪದ್ಬಂಧುವೆ! ನೀನಾರೋ ತಿಳಿಯದು. ನಾನು ಕಠಿನವಾಗಿ ಮಾತನಾಡಿದೆ.

**ರಾಮ:**—ಒಳಸಂಚುಗಾರರಿಗೆಲ್ಲ ಏನು ಶಿಕ್ಷೆಯನ್ನು ವಿಧಿಸಲಾಗುವುದೋ ಅಪ್ಪಣೆಯಾದರೆ, ಆ ಬಳಿಕ ನನ್ನ ಪರಿಚಯವನ್ನು ಅರಿಕೆ ಮಾಡುವೆನು. ಈ ಧೂರ್ತನು ಸಾರ್ವಭೌಮರನ್ನು ಕೊಲ್ಲುವುದರಲ್ಲಿದ್ದ ದ್ರೋಹಿ.

**ಕೃಷ್ಣ:**—ಕೊಲ್ಲಲು ಇವನಾರು?..ತಪ್ಪಾಯಿತೆಂದವನಿಗೆ ಕ್ಷಮೆಯೇ ಶಿಕ್ಷೆ.

**ಬಸವರಸ:**—(ಎದ್ದು) ಇಮ್ಮಡಿ ಭೈರರಸ ಒಡೆಯರ ಕೊಲೆಯೇ ನಡೆದು ಹೋಯಿತೆಂದೂ ಅವರು ಜೀವಂತರಾಗಿದ್ದುದಾಗಿ ಮಹಾಪ್ರಭುಗಳೂ ಮಹಾಪ್ರಧಾನರೂ ಹೇಳುತ್ತಿದ್ದುದು ನಿಜವಲ್ಲವೆಂದೂ ನಂಬಿದೆ. ಬಂಧು

ಪ್ರೇಮದ ಫಲವಾಗಿ ಒಳಸಂಚಿನಲ್ಲಿ ಸೇರಿದೆ. ಅಪರಾಧವಾಯಿತು. ನನ್ನ ಅಪರಾಧಕ್ಕೆ ತಕ್ಕ ದಂಡನೆಯನ್ನು ವಿಧಿಸಬೇಕು.

**ಕೃಷ್ಣ**:—ನೀವು ಕೂಡ ಸೇರಿದ್ದಿರಾ? ನಿಜ ನಾವು ಹೇಳಿದುದರಲ್ಲಿ ನಿಮಗೆ ನಂಬಿಕೆ ಬರಲು ಕಾರಣವಿರಲಿಲ್ಲ. ಭೈರರಸ ಒಡೆಯರು ನನಗೆ ಆಪ್ತ-ಮಿತ್ರರು. ನೀವೂ ಅಷ್ಟೆ. ಇನ್ನುಮುಂದೆ ಸನ್ಮಿತ್ರರಾಗಿರಬೇಕು.

**ಭೈರರಸ**:—ಈ ಪ್ರಾಣದಾನಕ್ಕಾಗಿ ನಾವೀರ್ವರೂ ಚಿರಋಣಿಗಳು. ನನ್ನ ಅಜ್ಞಾತವಾಸದಿಂದ ಸಾರ್ವಭೌಮರ ಪ್ರಾಣಕ್ಕೇ ಸಂಚಕಾರ ಬರುವಂತಿದ್ದ ಸನ್ನಿವೇಶವು ಒದಗಿದುದು ನನ್ನ ದೌರ್ಭಾಗ್ಯ.

**ರಂಗ**:—ದ್ರೋಹಿಗಳಾದ ನಮ್ಮಲ್ಲಿ ದಯೆ ತೋರಬೇಕು. ನಾನೂ ಬಸವರಸನೂ ಬುದ್ಧಿಶೂನ್ಯರಾಗಿ ಪಶುಗಳಂತೆ ವರ್ತಿಸಿದೆವು. ಮರಣದಂಡನೆಯೇ ನಾವು ಕೋರುವ ದಯೆ.

**ಕೃಷ್ಣ**:—ಪ್ರೇರಕ ವಸ್ತುವಿಗೆ ತಕ್ಕ ವರ್ತನೆ. ನಿಮ್ಮನ್ನು ರಾಜಪೌರೋಹಿತ್ಯದಿಂದ ಕದಲಿಸಿದುದರಿಂದ ಕ್ರೋಧ ಹುಟ್ಟಿದುದು ಯುಕ್ತವೇ ಸರಿ. ಇನ್ನುಮುಂದೆ ನಿಮ್ಮ ಸ್ಥಾನವು ನಿಮಗೆ ದೊರೆಯುವುದು. ಆದನ್ನು ಈ ಮೊದಲೇ ಅಪ್ಪಾಜಿಯವರು ನಿಷ್ಕರ್ಷಿಸಿದ್ದರು.........ನಮಗೆ ಪ್ರಾಣಾಪಾಯವನ್ನುಂಟುಮಾಡುವುದರಲ್ಲಿದ್ದ ಇವರು ವಿಚಾರಣೆಯ ಕಾಲದವರೆಗೂ ಬಂಧನದಲ್ಲಿರಲಿ.

**ಭೈರರಸ**:—ದ್ರೋಹಿಗಳಲ್ಲಿ ಕೂಡ ಕ್ಷಮೆದೋರುವ ಸಾರ್ವಭೌಮರ ವರ್ತನೆಯು ವಿಸ್ಮಯಜನಕವಾಗಿದೆ. ಕನ್ನಡಿಗರ ಸೌಭಾಗ್ಯ.

**ಕೃಷ್ಣ**:—ತಾಳ್ಮೆ ಶಾಂತಿಗಳಿಂದಿದ್ದು ನಿರಂತರವೂ ಸತ್ಯ ಧರ್ಮಗಳನ್ನಾ-ರಾಧಿಸುವುದೇ ರಾಜಧರ್ಮ.

**ಭೈರರಸ**:—ಭುವನೇಶ್ವರಿಯ ಕೃಪೆ. ಕನ್ನಡಿಗರ ಪುಣ್ಯ. ಪ್ರಜೆಗಳಿಗೆಲ್ಲ ವರಪ್ರಸಾದದಂತಿರುವ ದಿವ್ಯ ವಾಣಿಗಳು!

**ಕೃಷ್ಣ**:—ಅವು ನನ್ನ ವಾಣಿಗಳಲ್ಲ. ನಮ್ಮ ಆಸ್ಥಾನದಲ್ಲಿದ್ದ ರಾಮಕೃಷ್ಣಯ್ಯನ ವಾಣಿಗಳು....ಅಮೋಘ ವಾಣಿಗಳು. (ನಿಟ್ಟುಸಿರು ಬಿಟ್ಟು) ಇನ್ನೆಲ್ಲಿ ನನ್ನ ರಾಮಕೃಷ್ಣಯ್ಯ!

**ರಾಮ:**—(ಗಡ್ಡ ಮೀಸೆಗಳನ್ನು ಕಿತ್ತೆಸೆದು) ಇಲ್ಲೇ ಇದ್ದಾನೆ, ತಮ್ಮ ರಾಮಕೃಷ್ಣ. ನಾನು ಮುಖವನ್ನು ತೋರಿಸಕೂಡದೆಂಬ ಆಜ್ಞೆಯನ್ನು ಮೀರಿದ ಅಪರಾಧವನ್ನು ಮನ್ನಿಸಬೇಕು. ಸಾರ್ವಭೌಮರ ಸತ್ಯ ಧರ್ಮಗಳನ್ನೂ ಶಾಂತಿ ಕ್ಷಮೆಗಳನ್ನೂ ಕಂಡು ನನ್ನ ಹೃದಯದಿಂದ ಆನಂದವು ಹಾಲು ಉಕ್ಕಿದಂತೆ ಉಕ್ಕುತ್ತಿದೆ. ಪ್ರಜೆಗಳಾದ ನಮ್ಮೆಲ್ಲರ ಪುಣ್ಯ.... ತಾಯಿ! ಎಂತಹ ಸುದಿನವನ್ನು ನೋಡುವ ಸಂಯೋಗವನ್ನೊದಗಿಸಿ ಕೃಪೆದೋರಿದೆ!

**ಕೃಷ್ಣ:**—ನನ್ನ ರಾಮಕೃಷ್ಣಯ್ಯನವರನ್ನು ಕಂಡ ಈ ದಿನವು ನಿಜವಾಗಿಯೂ ಸುದಿನ. ಹಿಂದಿನ ಕೃಷ್ಣದೇವರಾಯನು ಈಗಿಲ್ಲ......ನೀವು ಕೆಲವು ಗ್ರಾಮಗಳನ್ನು ಸರ್ವಮಾನ್ಯವಾಗಿ ಸ್ವೀಕರಿಸಿ ಸಂತೋಷಪಡಿಸಬೇಕು.

**ರಾಮ:**—ಗ್ರಾಮಗಳನ್ನು ಅಗತ್ಯವಾಗಿ ಕೊಡಬೇಕು. ಆಗಬಹುದು.

**ಕೃಷ್ಣ:**—ಅಪ್ಪಾಜಿ! ರಾಯಸದವರಲ್ಲಿ ದಾನಶಾಸನವನ್ನು ಸಿದ್ಧಪಡಿಸಿ.

**ರಾಮ:**—ದಾನಶಾಸನವೇನೋ ಸಿದ್ಧವಾಗಲಿ. ಆದರೆ ಅದರಲ್ಲಿ ರಾಮಕೃಷ್ಣನೆಂದು ಬರೆಯಕೂಡದು. ಚಕ್ಕಣ್ಣನೆಂದು ಬರೆಯಿಸಿ ಕೃಪೆ ಮಾಡಬೇಕು. ಚಕ್ಕಣ್ಣನಿಗೇ ಗ್ರಾಮಗಳು ಸಲ್ಲಬೇಕು. ಆತನು ರಾಜಾಜ್ಞೆಯನ್ನು ಮೀರಿ, ಸಾವಿಗೂ ಸಿದ್ಧನಾಗಿ ನನ್ನನ್ನು ಒಳಕ್ಕೆ ಬಿಟ್ಟು ಧೈರ್ಯವನ್ನು ತೋರಿಸಿದುದರಿಂದ ನಾನು ನೇಪಥ್ಯದೊಳಕ್ಕೆ ಬಂದೆ.

**ಕೃಷ್ಣ:**—ರಾಮಕೃಷ್ಣಯ್ಯ! ನಿಮ್ಮಿಂದ ಸಾಮ್ರಾಜ್ಯವೂ ಉಳಿಯಿತು. ನನ್ನ ಪ್ರಾಣವೂ ಉಳಿಯಿತು. ನೀವು ಸಿದ್ಧಪುರುಷರು. ನನ್ನ ಆನಂದಕ್ಕೆ ಪಾರವೇ ಇಲ್ಲ.

**ರಾಮ:**—ನನ್ನ ಆನಂದಕ್ಕೂ ಪಾರವೇ ಇಲ್ಲ. ಕರ್ಣಾಟಕ ಸಾಮ್ರಾಜ್ಯದ ಸೌಭಾಗ್ಯ. ಪಂಚಘಂಟಾನಾದವು ಮೊಳಗುತ್ತಿದೆ. ವಿಜಯ, ವಿನಯ, ವಿದ್ಯಾಭಿಮಾನಗಳೆಂಬ ಮೂರು ಘಂಟೆಗಳ ಜೊತೆಗೆ ಧರ್ಮ ಸತ್ಯಗಳೆಂಬ ಘಂಟೆಗಳೂ ಮೊಳಗುತ್ತಿವೆ. ಈ ಘಂಟೆಗಳು ನಿರಂತರವೂ ಮೊಳಗಲಿ. ತಾಯಿ! ಕರ್ಣಾಟಕ ಸಾಮ್ರಾಜ್ಯವು ವೈಭವದಿಂದ ಬೆಳಗುವಂತೆ ಕರುಣಿಸು!

ಈ ಪಂಚಘಂಟಾನಾದದಿಂದ ಸಾಮ್ರಾಜ್ಯಲಕ್ಷ್ಮಿಯ ಆರಾಧನೆಯು ನಡೆಯುವಂತೆ ಕೃಪೆ ಮಾಡು. ಭುವನೇಶ್ವರೀದೇವಿ! ಇದೊಂದೇ ನಿನ್ನ ಪಾದಕಮಲದಲ್ಲಿ ನನ್ನ ಪ್ರಾರ್ಥನೆ.

(ಭಕ್ತಿಯಿಂದ ಕೈಮುಗಿದುಕೊಂಡು ಧ್ಯಾನಮಗ್ನನಾಗಿ ನಿಲ್ಲುವನು)

[ತೆರೆ ಬೀಳುವುದು]

—